# ಲಿಂಗರಾಜ ವಿಜಯ ಕಾವ್ಯ

ಹಾಗೂ

# ಕೆಲವು ಲಾವಣಿಗಳು



ಪ್ರಕಾಶಕರು :

ಸಾಹಿತ್ಯ ಸಮಿತಿ, ಲಿಂಗಾಯತ ವಿದ್ಯಾಭಿವೃದ್ಧಿ ಸಂಸ್ಥೆ,
ಧಾರವಾಡ

೧೯೮೨

# ಲಿಂಗಾಯತ ವಿದ್ಯಾಭಿವೃದ್ಧಿ ಸಂಸ್ಥೆ ಧಾರವಾಡ-೮

—ಪದಾಧಿಕಾರಿಗಳು—

ಶ್ರೀ ಬಿ.ಎಂ. ಗಂಜಿಗಟ್ಟಿ, ಬಿ.ಎ., ಎಲಿಲ್.ಬಿ. ನಿವೃತ್ತ ಡೆ. ಕಮೀಶನರ
ಧಾರವಾಡ ಅಧ್ಯಕ್ಷರು

ಶ್ರೀ ಎಚ್.ಎಸ್.ಹೊಸಮನಿ, ಬಿ.ಎ. ನಿವೃತ್ತ ಅ. ಕಮೀಶನರ
ಧಾರವಾಡ, ಉಪಾಧ್ಯಕ್ಷರು

೧ ಶ್ರೀ:ಕಡಬಸಪ್ಪನವರು ಸಿದ್ದಪ್ಪನವರು ಮಂಟೂರಶೆಟ್ಟರ.
ಹುಬ್ಬಳ್ಳಿ. ಚೇರಮನ್

೨ ಶ್ರೀ ಎಂ.ಸಿ. ಬಂಡಿ. ಬಿ.ಎಸ್‌ಸಿ., ಎಲೆಲ್.ಬಿ. ವಕೀಲ,
ಧಾರವಾಡ. ಗೌರವ ಕಾರ್ಯದರ್ಶಿ

೩ ಶ್ರೀ ಎನ್. ಎಂ. ಪಾಟೀಲ, ನಿವೃತ್ತ ಡಿ.ಎಸ್.ಪಿ.
ಧಾರವಾಡ ವ್ಯ.ಮ. ಸದಸ್ಯರು

೪ ಶ್ರೀ ಪಿ.ಕೆ. ಕಾಮೋಜಿ, ಬಿ.ಎ., ಜಿ.ಡಿ.ಸಿ.ಎ.
ನಿವೃತ್ತ ಜಾಯಿಂಟ ರಜಿಸ್ಟ್ರಾರ, ಸಹಕಾರಿ ಸಂಘಗಳು. "

೫ ಶ್ರೀ ಎಫ್.ಎನ್ ಹೂಗಾರ, ಎಂ.ಎ.,ಎಲೆಲ್‌ಬಿ. ವಕೀಲ
ಬಸನಾಳ, "

೬ ಶ್ರೀ ಬಿ.ಬಿ. ಕಣವಿ, ಎಂ.ಎ., ಬಿ.ಕಾಂ., ಎಲೆಲ್.ಬಿ.
ಪ್ರಿನ್ಸಿಪಾಲರು, ಕರ್ನಾಟಕ ಆರ್ಟ್ಸ ಕಾಲೇಜ, ಧಾರವಾಡ, "

೭ ಶ್ರೀ ಪಿ.ಸಿ.ಚವಡಿ, ಎಂ.ಎಸ್.ಸಿ.
ಲೆಕ್ಚರರ ಪಿ.ಸಿ. ಜಾಬೀನ ಸಾಯನ್ಸ ಕಾಲೇಜ, ಹುಬ್ಬಳ್ಳಿ, "

೮ ಶ್ರೀ ಎನ್.ಪಿ. ಕಲಿವಾಳ. ಎಂ.ಎಸ್‌ಸಿ., ಬಿ.ಇಡಿ.
ನಿವೃತ್ತ ಪಾಚಾರ್ಯರು ಧಾರವಾಡ, "

೯ ಶ್ರೀ ಎಸ್.ಎಲ್.ಪಾಟೀಲ, ಬಿ.ಎಸ್‌ಸಿ. ಬಿ.ಲಿಬ್(ಸಾಯನ್ಸ),
ಧಾರವಾಡ, "

೧೦ ಶ್ರೀ ಸಿ.ಎಲ್. ಪಾಟೀಲ, ಬಿ.ಎ. ಧಾರವಾಡ, "

೧೧ ಶ್ರೀ ಜಿ.ಆಯ್.ಶೆಟ್ಟರ, ಎಂ.ಎ. ಲೆಕ್ಚರರ,
ಶ್ರೀ ಮೃತ್ಯುಂಜಯ ಕಾಮರ್ಸ ಕಾಲೇಜ. ಧಾರವಾಡ, "

ಶ್ರೀ ಸಿ.ಜಿ. ಕಾಮೋಜಿ, ಅಕೌಂಟಂಟ.

ಶ್ರೀ ಎ.ವ್ಹಿ.ಕುರ್ಲಿ, ಕ್ಲಾರ್ಕ.

# ಲಿಂಗರಾಜ ವಿಜಯ ಕಾವ್ಯ

ಹಾಗೂ

# ಕೆಲವು ಲಾವಣಿಗಳು



ಪ್ರಕಾಶಕರು :

**ಸಾಹಿತ್ಯ ಸಮಿತಿ, ಲಿಂಗಾಯತ ವಿದ್ಯಾಭಿವೃದ್ಧಿ ಸಂಸ್ಥೆ,**

**ಧಾರವಾಡ**

೧೯೮೨

“ಲಿಂಗರಾಜ ವಿಜಯ ಕಾವ್ಯ ಹಾಗೂ ಕೆಲವು ಲಾವಣಿಗಳು” ಈ ಗ್ರಂಥವನ್ನು ಸಾಹಿತ್ಯ ಸಮಿತಿ ಲಿಂಗಾಯತ ವಿದ್ಯಾಭಿವೃದ್ಧಿ ಸಂಸ್ಥೆಯವರು ಪ್ರಕಟಿಸಿದ್ದಾರೆ. (೧೯೮೨)





ಮೊದಲ ಮುದ್ರಣ : ಮೇ ೧೯೮೨

ಬೆಲೆ : **ನಾಲ್ಕು ರೂಪಾಯಿಗಳು**



ಮುದ್ರಕರು :
ಡಾ. ಎಸ್. ಜಿ. ಶಿವಾರಿ, ಎಂ. ಎ., ಪಿಎಚ್. ಡಿ.,
ಸುಪರಿಂಟೆಂಡೆಂಟ, ತೋಂಟದಾರ್ಯ ಪ್ರೆಸ್, ಧಾರವಾಡ–೮

# ಪ್ರಕಾಶಕರ ನುಡಿ

೧

ನವಿಲುಗುಂದ ಶಿರಸಂಗಿ ಸರದೇಸಾಯಿಗಳಾದ ಲಿಂಗೈಕ್ಯ, ತ್ಯಾಗವೀರ ಲಿಂಗ-ರಾಜರು, ಧಾರವಾಡ ಲಿಂಗಾಯತ ವಿದ್ಯಾಭಿವೃದ್ಧಿ ಸಂಸ್ಥೆಗೆ ರಾಜೋಚಿತ ದೇಣಿಗೆಯನ್ನಿತ್ತು, ಈ ಸಂಸ್ಥೆಯು ತನ್ನ ಕಾರ್ಯವನ್ನು ಚಿರಂತನವಾಗಿ ಮುಂದುವರಿಸಿಕೊಂಡು ಹೋಗಲು ಸಮರ್ಥವಾಗಲೆಂಬ ಘನೋದ್ದೇಶದಿಂದ ಹರಸಿದ ಮಹನೀಯರಲ್ಲಿ ಅಗ್ರಗಣ್ಯರು.

ಇದಲ್ಲದೆ ತಮ್ಮ ಇಡೀ ಸಂಸ್ಥಾನವನ್ನೇ ಸ್ಥಿರ–ಚರ ಆಸ್ತಿಗಳೊಡನೆ ಲಿಂಗಾಯತ ಬಡ ವಿದ್ಯಾರ್ಥಿಗಳ ವಿದ್ಯಾರ್ಜನೆಗೆ ಸಹಾಯವಾಗಲೆಂದು ಸ್ವಯಂ ಪ್ರೇರಣೆಯಿಂದ ದಾನಮಾಡಿ ಅಪ್ರತಿಮ ತ್ಯಾಗವೀರರೆಂದು ಕೀರ್ತಿವೆತ್ತ ಘನವಂತರು.

ಇಂಥ ಮಹನೀಯರ ಕೃಪೆಯ ಬಲದಿಂದ ನಮ್ಮ ಈ ಮಾತೃ ಸಂಸ್ಥೆಯು ಕಾರ್ಯಾರಂಭ ಮಾಡಿ ಕ್ರಿ. ಶ. ೩೦–೯–೧೯೮೩ ರಂದು ತನ್ನ ೧೦೧ನೆಯ ವರ್ಷದಲ್ಲಿ ಪಾದಾರ್ಪಣ ಮಾಡಲಿದೆ. ಇದು ವರೆಗೆ ಈ ಸಂಸ್ಥೆಯು ಪ್ರತಿವರ್ಷ ಜನೇವರಿ ೧೦ ರಂದು ಈ ದಾನಿವರ್ಯರ ಜಯಂತಿ ಉತ್ಸವವನ್ನು ಆಚರಿಸಿ ಅವರಿಗೆ ತನ್ನ ಕೃತಜ್ಞತೆಯನ್ನು ಸಲ್ಲಿಸುತ್ತ ಬಂದಿದೆ; ಬರುತ್ತಿದೆ.

ಆದರೆ ಶ್ರೀ ಲಕ್ಕಪ್ಪ ಅ. ಶಿರಹಟ್ಟಿ (ನಿವೃತ್ತ ಅಸಿಸ್ಟಂಟ ಡೆಪ್ಯೂಟಿ ಎಜ್ಯುಕೇಶ-ನಲ್ ಇನಸ್ಪೆಕ್ಟರ) ತೊರವಿ, ಇವರು ತಮ್ಮ ಕೃತಿಯಾದ "ಲಿಂಗರಾಜ ವಿಜಯ" ಕಾವ್ಯವನ್ನು ನಮ್ಮ ಈ ಸಂಸ್ಥೆಯ ವತಿಯಿಂದ ಪ್ರಕಟಿಸಲು ಸಂತೋಷದಿಂದ ಒಪ್ಪಿ-ಕೊಂಡು ಪರಮಪೂಜ್ಯ ಲಿಂಗರಾಜರಿಗೆ ಅವಿಸ್ಮರಣೀಯವಾದ ಕೃತಜ್ಞತೆಯನ್ನು ಸಲ್ಲಿಸಲು ಅವಕಾಶ ಒದಗಿಸಿಕೊಟ್ಟಿದ್ದಾರೆ. ಆದ್ದರಿಂದ ಸಂಸ್ಥೆಯು ಅವರಿಗೆ ಚಿರಋಣಿಯಾಗಿದೆ. ಈ ಸುಪ್ರಸಂಗವು ಸಂಸ್ಥೆಯ ಜೀವನದಲ್ಲಿ ಒಂದು ಮಹತ್ವಪೂರ್ಣವಾದ ಮೈಲುಗಲ್ಲಾಗಿದೆ. ಕಾವ್ಯವು ಗಾತ್ರದಲ್ಲಿ ಕಿರಿದಾಗಿದ್ದರೂ ಸತ್ವದಲ್ಲಿ ಹಿರಿದಾಗಿದೆ, ಎಂದರೆ ಅತಿಶಯೋಕ್ತಿಯಾಗಲಾರದು ವಾರ್ಧಿಕಷಟ್ಪದಿ ಮಹಾಕಾವ್ಯಗಳ ಪ್ರತಿಭೆಯನ್ನು ಇಲ್ಲಿ ಕಾಣಬಹುದೆಂದು ಹೇಳಲು ಹೆಮ್ಮೆ ಎನಿಸುತ್ತದೆ. ಆದರೂ ಕೃತಿಕಾರರು........ 'ಕನ್ನಡದ ಕವಿವಿಭುದರೊಳಿಗಂ ಲಕ್ಕಪಂ' ಎಂದು ತಮ್ಮನ್ನು ತಾವು ಕರೆದುಕೊಂಡು ತಮ್ಮ ವಿನಯವನ್ನೇ ವ್ಯಕ್ತಪಡಿಸಿದ್ದಾರೆ.

ಶ್ರೀ ಶಿರಹಟ್ಟಿ ಅವರು ಗದ್ಯ–ಪದ್ಯ ಎರಡರಲ್ಲಿಯೂ ಅನೇಕ ಗ್ರಂಥಗಳನ್ನು ರಚಿಸಿದ್ದಾರೆ. "ಬಸವೇಶ್ವರ ದೇವರು", "ಸಿದ್ಧರಾಮ ಚರಿತ್ರೆ", "ಕ್ರಾಂತಿ

ಗಂಗೋತ್ರಿ" (ಅಕ್ಕನಾಗಮ್ಮನವರ ಚರಿತ್ರೆ) ಮುಂತಾದ ಮಹಾತ್ಮರ ಚರಿತ್ರೆಗಳನ್ನು, "ನೂರೊಂದು ನೆಲೆಯ ನಿಲುವು", "ಶಿವಾದ್ವೈತ ಸಿದ್ಧಾಂತ" ಮೊದಲಾದ ತಾತ್ವಿಕ ಗ್ರಂಥಗಳನ್ನು, "ವೀರರಾಣಿ ಕೆಳದಿಯ ಚೆನ್ನಮ್ಮ" ಇತ್ಯಾದಿ ಚಾರಿತ್ರಿಕ ಕಾದಂಬರಿಗಳನ್ನೂ ಬರೆದಿದ್ದಾರೆ. ಅವರ ಸಾಹಿತ್ಯವು ವೈವಿಧ್ಯಮಯವೂ, ವೈಶಿಷ್ಟ್ಯಪೂರ್ಣವೂ ಆಗಿದೆ. ಇಂತು ವಿಪುಲ ಸಾಹಿತ್ಯ ನಿರ್ಮಿಸಿ ಕನ್ನಡ ಸರಸ್ವತಿಯ ಭಾಂಡಾರವನ್ನು ಶ್ರೀಮಂತಗೊಳಿಸುತ್ತಿರುವ ಪ್ರತಿಭಾವಂತ ಸಾಹಿತಿ. ಶರಣ ಶಿರಹಟ್ಟಿಯವರ ಕೃತಿ "ಲಿಂಗರಾಜ ವಿಜಯ" ಕಾವ್ಯವನ್ನೊಳಗೊಂಡ "**ಲಿಂಗರಾಜ ವಿಜಯ ಕಾವ್ಯ ಹಾಗೂ ಕೆಲವು ಲಾವಣಿಗಳು**" ಈ ಗ್ರಂಥವನ್ನು ಪ್ರಕಟಿಸಲು ನಮ್ಮ ಸಮಿತಿಯು ಅಭಿಮಾನ ತಳೆದಿದೆ.

ಸತ್ ಶ್ರವಣ, ಸದ್ಗೋಷ್ಠಿಗಳನ್ನು ಬಯಸುವವರು ಅನುಕರಣೀಯವಲ್ಲದ, ಅವೈಜ್ಞಾನಿಕ ಪವಾಡಗಳ ಮೆರವಣಿಗೆಗಳನ್ನು ವರ್ಣಿಸುವ ಪುರಾಣಗಳಿಗಿಂತ ಗೃಹಸ್ಥರಾದ ಲಿಂಗರಾಜರಂಥ ಜಾಗ್ರತಾತ್ಮರ ಚರಿತ್ರೆಗಳ ಪ್ರವಚನಗಳನ್ನು ಏರ್ಪಡಿಸುವದು ಶ್ರೇಯಸ್ಕರವೆಂದು ನಮ್ಮ ಅಭಿಮತ.

೨

ಈ ಸಂಸ್ಮರಣೀಯ ಸಂದರ್ಭದಲ್ಲಿ "ತನ್ನ ಸಾವಿಂದೆ ಸ್ವಮತಹಿತವು ಬದುಕುತಿರ್ದೊಡೆ ಮುದದಿ ಸಾಯ್ವೆ" ಎಂದು ಪ್ರಥಮ ಅಖಿಲ ಭಾರತ ವೀರಶೈವ ಮಹಾಸಭೆಯ ಅಧ್ಯಕ್ಷ ಪೀಠದಿಂದ ಸಾರಿ, ಸಮಾಜ ಕಲ್ಯಾಣಕ್ಕಾಗಿ ಆತ್ಮಾರ್ಪಣೆಗೂ ಸಿದ್ಧರೆಂದು ಘೋಷಿಸಿದ, ತ್ಯಾಗವೀರ ಲಿಂಗರಾಜರ ಕೀರ್ತಿ ಚಂದ್ರಮನಿಗೆ ಗ್ರಹಣ ಒಡ್ಡುವ ಸಾಹಿತ್ಯಸೃಷ್ಟಿಯ ಬಗೆಗೆ ಪ್ರಸ್ತಾಪಿಸಲು ತುಂಬಾ ವಿಷಾದವೆನಿಸುತ್ತದೆ. ಯಾವುದಾದರೊಂದು ಮಾನವ ಕಲ್ಯಾಣದ ಕಾರ್ಯವನ್ನು ನೆರವೇರಿಸುವದು ತಮಗಾಗಲಿ ಅಥವಾ ತಮ್ಮ ಅನುಗ್ರಹ ಪಡೆದವರಿಗಾಗಲಿ ಸಾಧ್ಯವೇ ಹೊರತು ಅನ್ಯರಿಗೆ ಸಾಧ್ಯವೇ ಇಲ್ಲವೆಂದು ಬಿಂಬಿಸಲು ಇಂಥ ಸಾಹಿತ್ಯವನ್ನು ನಿರ್ಮಿಸಿದ್ದಾರೆ; ನಿರ್ಮಿಸುತ್ತಿದ್ದಾರೆ.

ಲಿಂಗರಾಜರ ಕೊಡುಗೆ ಸ್ವಯಂ ಪ್ರೇರಿತವಾದರೂ, ಅವರು ಅಪ್ರತಿಮ ತ್ಯಾಗಿಗಳೆನಿಸಿಕೊಳ್ಳುವದು ತಮ್ಮವರ ಆಶೀರ್ವಾದವಿಲ್ಲದಿದ್ದರೆ ಸಾಧ್ಯವೆ ಇರಲಿಲ್ಲವೆಂದು ಪ್ರಚಾರ ಪಡಿಸಿದ್ದಾರೆ, ಪಡಿಸುತ್ತಿದ್ದಾರೆ. ಇಂಥ ಸಾಹಿತ್ಯ ಸೃಷ್ಟಿಸಿ ನಾಡಿನ ನಿಜ ಇತಿಹಾಸವನ್ನು ಮರೆಯಿಸಿ, ನಿಜವಲ್ಲದ ಇತಿಹಾಸ ಬರೆಯುತ್ತ ಮುಂದುವರೆದಿರುವದು ಶೋಚನೀಯ. ದಿಟವನಳಿದು ಸಟೆಯೇ ಸತ್ಯವೆಂದು ಸಾರುವ ಈ ಸಾಹಿತ್ಯವನ್ನು ಖಂಡಿಸಿ ಲಿಂಗರಾಜರ ನಿಜಕೀರ್ತಿಪ್ರಭೆಯು ಪ್ರಜ್ವಲಿಸುವಂತೆ ಎಚ್ಚರಿಕೆ ವಹಿಸದಿದ್ದರೆ ಕರ್ತವ್ಯಚ್ಯುತಿಯಾಗುವದೆಂದು ಭಾವಿಸುತ್ತೇವೆ. ಆದ್ದರಿಂದ ಈ ವಿಷಯವನ್ನು

ಸಂಕ್ಷಿಪ್ತವಾಗಿಯಾದರೂ ಇಲ್ಲಿ ಚರ್ಚಿಸುವದು ಕ್ರಮಪ್ರಾಪ್ತವಾಗಿದೆ. ತ್ಯಾಗವೀರ ಲಿಂಗರಾಜರ ಧವಲ ಕೀರ್ತಿಗೆ ಭಂಗವನ್ನುಂಟು ಮಾಡುವ ಪ್ರಸ್ತಾಪಗಳ ಹಲವಾರು ಪ್ರಕಟನೆಗಳು ಒಳಗೊಂಡಿವೆ. ಅವುಗಳಲ್ಲಿ ಕೆಲವನ್ನು ಮಾತ್ರ ಉದಾಹರಣೆಗಾಗಿ ಆಯ್ದುಕೊಂಡು ಇಲ್ಲಿ ವಿವೇಚಿಸಲಾಗಿದೆ.

(೧) ದ್ಯಾಂಪುರದ ಶ್ರೀ ಚನ್ನಕವಿ ಕೃತ ಶ್ರೀ ಮ. ನಿ. ಪ್ರ. ಅನ್ನದಾನೇಶ್ವರ ಪುರಾಣದಲ್ಲಿ ಲಿಂ. ಲಿಂಗರಾಜರು ಪುತ್ರಫಲಾಪೇಕ್ಷೆಯಿಂದ ಅನ್ನದಾನೇಶ್ವರ ಶಿವಯೋಗಿಗಳ ದರ್ಶನಕ್ಕೆ ಏಕಾಂಗಿಯಾಗಿ ಹೋಗಿದ್ದರೆಂದೂ ಮತ್ತು ಲಿಂಗರಾಜರ ಅಪೇಕ್ಷೆಯನ್ನು ದಿವ್ಯಜ್ಞಾನದಿಂದ ತಿಳಿದು ಆ ತಪಸ್ವಿಗಳು, ಲಿಂಗರಾಜರಿಗೆ "ಪುತ್ರಫಲಾಪೇಕ್ಷೆಯನ್ನು ಮಾಡಬೇಡ, ಮಠೋದ್ಧಾರ ಕಾರ್ಯಕ್ಕಾಗಿ ಸಂಸ್ಥಾನವನ್ನು ದಾನಮಾಡು" ಎಂದು ಉಪದೇಶಿಸಿದರೆಂದು ಹೇಳಲಾಗಿದೆ. ಲಿಂಗರಾಜರ ಬಯಕೆಯಲ್ಲಿ ಆಕ್ಷೇಪಾರ್ಹವಾದುದೇನನ್ನು ಕಂಡು ಅನ್ನದಾನೇಶ್ವರ ಶಿವಯೋಗಿಗಳು ಪುತ್ರ ಫಲಾಪೇಕ್ಷೆ ಮಾಡಬೇಡ ಎಂದು ಉಪದೇಶಿಸಿದರು ? ಗೃಹಸ್ಥನಾದವನು ಸಂತಾನಾಭಿವೃದ್ಧಿಗಾಗಿ ಹಂಬಲಿಸುವದು ಸ್ವಾಭಾವಿಕವಲ್ಲವೆ ? ನ್ಯಾಯ ಹಾಗು ಧರ್ಮಸಮ್ಮತವಲ್ಲವೆ ?

(೨) ಹುಕ್ಕೇರಿಯ ಪಂಡಿತ ಸದಾಶಿವ ಕವಿ ವಿರಚಿತ 'ಶ್ರೀಮದಥಣಿ ಶಿವಯೋಗಿಗಳ ಚರಿತ್ರೆ' ಇದರಲ್ಲಿ ಪ್ರಸ್ತಾಪಗೊಂಡಿರುವ ಪ್ರಸಂಗಗಳು ಇಂತಿವೆ :

ಲಿಂಗರಾಜರು ಒಮ್ಮೆ ಅಥಣಿ ಮುರುಘೇಂದ್ರ ಶಿವಯೋಗಿಗಳನ್ನು ಶಿರಸಂಗಿಯ ಅರಮನೆಗೆ ದಯಮಾಡಿಸಿ ಅಲ್ಲಿ ಲಿಂಗಾರ್ಚನೆ ಪೂರೈಸಿ ಎನ್ನ ಮನೆತನವನ್ನು ಉದ್ಧರಿಸಬೇಕೆಂದು ಬಿನ್ನೈಸಿಕೊಂಡರು. ಶಿವಯೋಗಿಗಳು ಶಿರಸಂಗಿಗೆ ಬಿಜಯಂಗೈದು ಅರಮನೆಯಲ್ಲಿ ದಿನದಿನವೂ ಲಿಂಗಾರ್ಚನೆ ಪೂರೈಸುತ್ತ ಕೆಲಕಾಲ ಅಲ್ಲಿ ಉಳಿದುಕೊಂಡಿದ್ದರು.

ಹೀಗಿರುತ್ತಿರಲು ಒಂದು ದಿನ ಯಾರೂ ಇಲ್ಲದ ಸಮಯ ಸಾಧಿಸಿ, ಒಂದು ದೆವ್ವವು ಮುದುಕಿಯ ರೂಪದಲ್ಲಿ ಶಿವಯೋಗಿಗಳೆದುರು ಕಾಣಿಸಿಕೊಂಡು, "ದೇವಾ ! ನಿನ್ನ ದರ್ಶನದಿಂದ ನನ್ನ ಬಹುದಿನದ ಬಯಕೆ ಈಡೇರಿತು; ಇನ್ನು ಹೋಗುವೆನೆಂದು" ನುಡಿದು ಅಪ್ಪಣೆ ಪಡೆದು ಮಾಯವಾಯಿತು.

ಮರುದಿನ ಲಿಂಗರಾಜರು, ಈ ಭೂತದ ಪ್ರಸ್ತಾಪವೆತ್ತಿ ಅದರ ಪೀಡೆಯನ್ನು ದೂರ ಮಾಡಬೇಕೆಂದು ಶಿವಯೋಗಿಗಳನ್ನು ಪ್ರಾರ್ಥಿಸಿಕೊಂಡರು. ಲಿಂಗರಾಜರ ಬೇಡಿಕೆಯನ್ನು ಕೇಳಿದೊಡನೆ ಶ್ರೀಗಳು, ಆ ಭೂತ ಹಿಂದಿನ ದಿನವೇ ತೊಲಗಿತೆಂದು ತಿಳಿಸಿ ಅಭಯವನ್ನಿತ್ತರು. ತಕ್ಷಣವೆ ಲಿಂಗರಾಜರು ಮಹಾಪಾದದ ಕೃಪೆಯಿಂದ ಅರಮನೆಯು ಪುನೀತವಾಯಿತು; ಈ ಕಾರುಣ್ಯಕ್ಕಾಗಿ ನನ್ನ ಸಕಲ ಸಂಪತ್ತನ್ನು

ನಿಮಗೆ ಅರ್ಪಿಸಿದ್ದೇನೆ; ಸ್ವೀಕರಿಸಿ ನನ್ನನ್ನು ಉದ್ಧರಿಸಿಬೇಕೆಂದು ವಿಜ್ಞಾಪಿಸಿಕೊಂಡರು. ಪ್ರತಿಯಾಗಿ ಶಿವಯೋಗಿಗಳು, ನಿನ್ನ ಸಂಪತ್ತು ನನಗೆ ಬೇಡ. ಅದನ್ನು ನೀನು "ಧರ್ಮಕ್ಕೆರೆ, ಅದರಿಂದ ಅಂಗಜಾಹಿತನೊಲಿವನೆಂದು" ಉಪದೇಶಿಸಿದರು.

ಇಲ್ಲಿ ಗಮನಿಸಬೇಕಾದ ಅಂಶಗಳಿವು :—

(ಅ) ಭೂತ ಹೊರಟು ಹೋಗುವ ಮೊದಲು ಅದರ ಸಂಬಂಧವಾಗಿ ಶಿವ-ಯೋಗಿಗಳೆದುರು ಲಿಂಗರಾಜರು ಉಸಿರೊಡೆಯದಿರುವದು ವಿಚಿತ್ರವೆನಿಸುವದಿಲ್ಲವೆ?

(ಆ) ಪಿಶಾಚಿಯ ಸ್ವಂತ ಹೇಳಿಕೆಯ ಪ್ರಕಾರ ಅದು ಶಿವಯೋಗಿಗಳ ಪಾದ ದರ್ಶನ ಪಡೆದು ಪಾವನವಾಗಬೇಕೆಂಬ ಸತ್‌ಸಂಕಲ್ಪದಿಂದ ಅರಮನೆಯಲ್ಲಿ ವಾಸ-ವಾಗಿತ್ತೇ ಹೊರತು ಯಾರಿಗಾದರೂ ತೊಂದರೆ ಕೊಡುವ ಉದ್ದೇಶ ಹೊಂದಿರಲಿಲ್ಲ.

(ಇ) ಒಂದು ಪಿಶಾಚಿಯನ್ನು ಅರಮನೆಯಿಂದ ಓಡಿಸಿದ್ದುದಕ್ಕಾಗಿ ತಮ್ಮ "ಸಕಲ ಸಂಪತ್ತನ್ನು" ಧಾರೆಯೆರೆಯುವಷ್ಟು ಮಂದಮತಿ ಹಾಗು ಮುಗ್ಧ ಭಕ್ತಿಯುಳ್ಳವರಾಗಿರಲಿಲ್ಲ, ಆ ಲಿಂಗರಾಜರು.

೩) **ಸಾವಧಾನ ಪತ್ರಿಕೆ:—** ಈ ಪತ್ರಿಕೆಯ ಸಂ. ೩೨ ಸಂ ೭ ರಲ್ಲಿ ಅದರ ಸಂಪಾದಕರಾದ ಪಂ. ನಾಗಭೂಷಣ ಶಾಸ್ತ್ರಿಗಳು "ಲಿಂಗರಾಜರು ತಮ್ಮ ಸಂಸ್ಥಾನವನ್ನು ಸಮಾಜದ ಬಡಮಕ್ಕಳ ವಿದ್ಯಾಭ್ಯಾಸಕ್ಕಾಗಿ ತ್ಯಾಗಮಾಡುವ ಪ್ರೇರಣೆಯನ್ನು ಮಾಡಿದವರು ಶಿವಯೋಗ ಮಂದಿರ ಸ್ಥಾಪಕರಾದ ಲಿಂ. ಹಾನಗಲ್ಲ ಕುಮಾರ ಸ್ವಾಮಿಗಳೆಂಬುದು ಅವಿಸ್ಮರಣೀಯವು" ಎಂದು ಉಲ್ಲೇಖಿಸಿದ್ದಾರೆ. ಈ ಲೇಖವು ಪ್ರಕಟವಾದುದು ಲಿಂಗರಾಜರ ಜಯಂತಿಯು ಸಮೀಪಿಸುತ್ತಿದ್ದಾಗ. ಆದುದರಿಂದ ಸ್ವಾಭಾವಿಕವಾಗಿ ಈ ಲೇಖನದ ಮುಖ್ಯ ಉದ್ದೇಶ ಶ್ರೀ ಲಿಂಗರಾಜರನ್ನು ಅವರು ಸಮಾಜಕ್ಕೆ ತದ್ವಾರಾ ನಾಡಿಗೆ–ಮಾಡಿದ ಮಹದುಪಕಾರಕ್ಕಾಗಿ ಸ್ಮರಿಸಿ ಅವರಿಗೆ, ಕೃತಜ್ಞತೆಗಳನ್ನು ಸಮರ್ಪಿಸುವದಾಗಿರಬೇಕಾಗಿತ್ತು. ಆದರೆ ಹಾನಗಲ್ಲ ಶ್ರೀಗಳವರ ಪ್ರೇರಣೆ ಇಲ್ಲದಿದ್ದರೆ ಪರಮಪೂಜ್ಯ ಲಿಂಗರಾಜರು ದಾನ ಮಾಡುತ್ತಿರಲಿಲ್ಲ. ಆದುದರಿಂದ ಅವರಿಗೆ ತ್ಯಾಗವೀರರೆಂಬ ಕೀರ್ತಿ ಲಭಿಸುತ್ತಿರಲಿಲ್ಲವೆಂಬ ಅರ್ಥವನ್ನು ಗರ್ಭೀಕರಿಸಿಕೊಂಡಂತಿದೆ. ಇದೊಂದು ಹೊಗಳಿ ತೆಗಳುವ ಹೊಸರೀತಿಯೆನ್ನಬಹುದು.

ಈ ವರೆಗೆ ಮಾಡಿದ ವಿವೇಚನೆಗಳಿಂದ ತಮ್ಮ ಸಂಸ್ಥಾನವನ್ನು ದಾನಮಾಡಲು ಲಿಂಗರಾಜರಿಗೆ, ಹಾಳಕೆರೆಯ ಶ್ರೀಗಳು, ಅಥಣಿಯ ಶ್ರೀಗಳು, ಹಾಗು ಹಾನಗಲ್ಲ ಶ್ರೀಗಳು, ಹೀಗೆ ಮೂವರು ಮಹಾಶಿವಯೋಗಿಗಳು ಉಪದೇಶವಿತ್ತಿದ್ದಾರೆಂಬ ವಿಷಯವನ್ನು ವಾಚಕರ ಗಮನಕ್ಕೆ ತರಲಾಗಿದೆಯಷ್ಟೆ.

ಈ ಮೂವರ ಬಗೆಗೆ ಪ್ರಸ್ತಾಪಿಸಿದ ಲೇಖಕರು ತಮ್ಮ ತಮ್ಮ ಚರಿತ್ರ ನಾಯಕರ ಉಪದೇಶದಿಂದಲೇ ಲಿಂಗರಾಜರು 'ತ್ಯಾಗವೀರ'ರೆನಿಸಿಕೊಂಡರೆಂದು ಸಮರ್ಥಿಸಿಕೊಳ್ಳುತ್ತಿರುವದು ಆಯಾ ಉಲ್ಲೇಖಗಳಿಂದ ಸ್ಪಷ್ಟಪಡುತ್ತದೆ. ಆದ್ದರಿಂದ

ಒಬ್ಬರ ವಾದವು ಇನ್ನಿಬ್ಬರ ವಾದಗಳನ್ನು ಅಸತ್ಯವೆಂದು ನಿರ್ಣಯಿಸುತ್ತದೆ. ಇಂಥ ಸಂದಿಗ್ಧ ಸನ್ನಿವೇಶದಲ್ಲಿ ಈ ಮೂವರ ಹೇಳಿಕೆಗಳೂ ಹುರಳಿಲ್ಲವೆಂದು ತಳ್ಳಿ ಹಾಕಿ, ಈ ಮೊದಲು ಹೇಳಿದ ಪ್ರಕಾರ ಲಿಂಗರಾಜರ ತ್ಯಾಗವು ಸ್ವಪ್ರೇರಿತವೆಂದು ನಿರ್ಣಯಿಸು-ವದು ಅನಿವಾರ್ಯವೆನಿಸದಿರದು. ಈ ಅಭಿಪ್ರಾಯವೇ ಸತ್ಯವಾದುದೆಂದು ಲಿಂ.ರಾ.ಬ. ರುದ್ರಗೌಡ ಚೆನ್ನವೀರಗೌಡ ಅರಟಾಳ ಆಯ್. ಎಸ್. ಬ. ಇವರ ಜೀವನ ಚರಿತ್ರೆ (ಅಪ್ರಕಟಿತ ೧೧೮ಳ ಪುಟಗಳ ಹೆಬ್ಬೊತ್ತಿಗೆ) ಯಿಂದ ಆಯ್ದು ಇಲ್ಲಿ ಉದ್ಧರಿಸಿರುವ ಅವತರಣಿಕೆಗಳು ನಿಸ್ಸಂದಿಗ್ಧವಾದ ಸಮರ್ಥನೆಗಳನ್ನು ಒದಗಿಸುತ್ತವೆ.

ಲಿಂ. ರಾ॥ ಬ॥ ರುದ್ರಗೌಡ ಅರಟಾಳ ಇವರ ಜೀವನ ಚರಿತ್ರೆ ಭಾಗ ೧ ಪುಟ ೪೪೭ ರಲ್ಲಿ ಹೀಗೆ ಉಲ್ಲೇಖಿಸಲಾಗಿದೆ.

"ಮುಂದೆ ದಿನದಿನಕ್ಕೆ ಬೇನೆಯು ಬಲಿಯುತ್ತ ನಡೆಯಲು, ಸ್ಮೃತಿಯು ಇನ್ನೂ ಪೂರ್ಣವಾಗಿ ಇರುವಾಗಲೇ ರಾ॥ ಬ॥ ಅರಟಾಳ ಸಾಹೇಬರವರಿಗೆ ತಮ್ಮ ಅಂತರಂಗವನ್ನು ತಿಳಿಸಬೇಕೆಂದು ಅವರ ದರ್ಶನವನ್ನಿಚ್ಛಿಸಿ ಬೆಳಗಾವಿಗೆ ತಾರು ಮಾಡಿದರು. ತಾರು ನೋಡಿ ತಳವುಳಿಸಿ ತಡಮಾಡದೆ ಹೊರಟು ರಾ॥ ಬ॥ ರವರು ಶ್ರೀಮಂತರವರನ್ನು ಕಂಡುಕೊಂಡರು. ಮಿತ್ರ ಮುಖಾವಲೋಕನ ಮಾತ್ರದಿಂದ ಶ್ರೀಮಂತರು ತಮ್ಮ ಅಪೇಕ್ಷೆಯು ಪರಿಪೂರ್ಣವಾಯಿತೆಂದು ತಿಳಿದರು. ಆ ಬಳಿಕ ಅವರೊಡನೆ ಹೆಚ್ಚು ಮಾತನಾಡುವದಕ್ಕಾಗಲಿಲ್ಲ. ಆದರೆ ಸಂಸ್ಥಾನದ ಉತ್ಪತ್ತಿಯೆಲ್ಲ ಲಿಂಗಾಯತ ಎಜ್ಯುಕೇಶನ್ ಫಂಡಿಗೆ ಕೂಡಿಸಲ್ಪಡಬೇಕೆಂತಲೂ, ಅದಕ್ಕಾಗಿ ನಿಮ್ಮನ್ನೇ ಮೊದಲು ಮಾಡಿ ಇಂತಿಂತಹ ಸದ್ಗೃಹಸ್ಥರು ಅದರ ಕಾರ್ಯಕರ್ತರಾಗಬೇಕೆಂತಲೂ, ತಾವು ಬರೆದು ಸರಕಾರದಲ್ಲಿಟ್ಟ ಮೃತ್ಯುಪತ್ರದ ಅಭಿಪ್ರಾಯವನ್ನಷ್ಟು ಮಾತ್ರ ಅವರಿಗೆ ತಿಳಿಸಿದರು.

"ಹೀಗೆ ಮಾಡುವದು ನ್ಯಾಯ ಸಮ್ಮತವಲ್ಲವೆಂತಲೂ ಲೋಕಕ್ಕೆ ವಿರುದ್ಧ ವಾಗುವದೆಂತಲೂ ಸಂಸ್ಥಾನದ ಹೆಸರನ್ನು ಉಳಿಸಿ ಫಂಡಿಗೂ ತಕ್ಕಷ್ಟು ಸಹಾಯ ಮಾಡುವಂತೆ ವ್ಯವಸ್ಥೆ ಮಾಡುವದಕ್ಕೆ ಬೇರೊಂದು ಶಾಸನವನ್ನು ಈಗೀಂದೀಗ ಬರೆಯಿಸಬೇಕೆಂತಲೂ ರಾ॥ ಬ॥ ರವರು ಎಷ್ಟು ಬಗೆಯಾಗಿ ಹೇಳಿಕೊಂಡರೂ ಶ್ರೀಮಂತರು ಅದನ್ನು ಕೇಳದೇ "ನನ್ನ ಸಂಕಲ್ಪಕ್ಕೆ ಯಾರೂ ಅಡ್ಡಿಯನ್ನು ಮಾಡ ಕೂಡದು, ನನ್ನ ಧರ್ಮ ಸಂಕಲ್ಪವನ್ನು ಕಾಪಾಡುವದು ಸರಕಾರದ ಹಾಗೂ ನಿಮ್ಮ ಕರ್ತವ್ಯವಾಗಿದೆ; ಮಿತ್ರರಾದ ನೀವು ಯಾವುದಕ್ಕೂ ಅಡ್ಡಿಬರಬಾರದು. ಬಹು ದಿವಸದಿಂದಲೂ ಬೇರೂರಿದ್ದ ನನ್ನ ದೃಢ ಸಂಕಲ್ಪವೇ ಹಾಗಿದೆ" ಎಂದು ನಿಷ್ಠುರವಾಗಿ ಹೇಳಿಬಿಟ್ಟದ್ದಲ್ಲದೆ ತಮ್ಮ ಪರಿವಾರವನ್ನು ಕುರಿತು : "ನನ್ನ ಬಳಿಯಲ್ಲಿ ಯಾರೊಬ್ಬರೂ ದುಃಖಿಸಕೂಡದು, "....ಯಾವತ್ತೂ ಆಪ್ತೇಷ್ಟರೆಂಬುವ ನಂಬಿಗಸ್ತರು ಎಷ್ಟು ಪರಿ-ಯಿಂದ ಹೇಳುವ ಯಾವ ಮಾತನ್ನೂ ಕೇಳದೆ ತಮ್ಮ ದೃಢಸಂಕಲ್ಪವನ್ನೇ ಸಾಧಿಸಿದರು;

ಪುಟ ೪೫೫ ರಲ್ಲಿ ಹೀಗಿದೆ "ಸಾರ್ವಜನಿಕರ ಹಿತದ ಸಭೆಗಳು ಅಥವಾ ಶ್ರೀಮದ್ವೀರಶೈವ ಮಹಾಸಭೆಗಳು ಅಲ್ಲಲ್ಲಿ ಆಗುತ್ತಿರುವಾಗ್ಗೆ ಸಭೆಗೆ ಹೋದರೆ ವರ್ಗಣಿಯನ್ನು ಕೊಡುವ ಪೀಕಲಾಟವು ಬರುವದೆಂದು ಎಷ್ಟೋ ವೀರಶೈವ ಧನ ದಾರ್ಢ್ಯರು ತಪ್ಪಿಸಿಕೊಳ್ಳುತ್ತಿರುವಾಗ ಯಾರ ಪ್ರೇರಣೆಯು ಎಳ್ಳಷ್ಟಿಲ್ಲದೆ ಸ್ವಂತ ಬುದ್ಧಿಯಿಂದ ಸಂಸ್ಥಾನಕ್ಕೆ ಸಂಸ್ಥಾನವನ್ನೇ ಸ್ವಮತಾಭ್ಯುದಯಕ್ಕಾಗಿ ಸಮರ್ಪಿಸಿದ ಶ್ರೀಮಂತ ಸರದೇಸಾಯಿಯವರ ಸಚ್ಚರಿತ್ರೆಯನ್ನು ಸಾವಿರಾರು ಪಾನಗಳವರೆಗೆ ಬರೆದರೂ ಸಾಕಾಗದು....ಷಟಸ್ಥಲಜ್ಞಾನಸಂಪನ್ನ ವಿರಕ್ತರ ಶಿರೋಮಣಿಗಳಾದ ಮೂಲ ಪೀಠಾಚಾರ್ಯರು ಸಹ ಇಂತಹ ದಾನಶೂರತೆಯನ್ನು ತೋರಿಸಲಿಲ್ಲ.

ಪುಟ ೯೮೪........ "ಶ್ರೀ ಮುತಲಗಪ್ಪ ದೇಸಾಯರ ಪವಿತ್ರ ಸಂಕಲ್ಪವು—ಅನ್ಯರ ಪ್ರೇರಣೆಯಿಲ್ಲದೆ ಶುದ್ಧವಾಗಿ ಸ್ವಯಮೇವ ಜನಿಸಿದ್ದುದರಿಂದಲೂ,........"

ಪುಟ ೪೯೦........ "ಲಾಭವನ್ನು ತಮ್ಮ ಸಮಾಜಕ್ಕೆ ಮಾಡಿಕೊಡುವ ಸಂಧಿಯನ್ನು ಸಫಲಗೊಳಿಸುವ ವಿಚಾರವು ಶ್ರೀಮಂತರ ನಿರ್ಮಲಾಂತಃಕರುಣಾರಸದಲ್ಲಿಯೇ ಪ್ರಾದುರ್ಭವಿಸಿ ಅದೇ ರಸದಿಂದಲೇ ಬೆಳೆದು ಜಗದಾಶ್ಚರ್ಯವನ್ನುಂಟು ಮಾಡಲಿಕ್ಕೆ ಹೊರಬಿದ್ದಿತೆಂದು ಹೇಳಬೇಕು.

**ಸಿರಸಂಗಿ ಲಿಂಗರಾಜರು :** (ಲೇಖಕರು : ದೇವೇಂದ್ರಕುಮಾರ ಹಕಾರಿ)

ಈ ಗ್ರಂಥದ ಪುಟ ೭೦ ರಲ್ಲಿ ಹೀಗೆ ಉಲ್ಲೇಖಿಸಲಾಗಿದೆ: "(ಲಿಂಗರಾಜರು) ಶಿವಯೋಗ ಮಂದಿರದ ಶ್ರೀ ಕುಮಾರ ಸ್ವಾಮಿಗಳ ಕೃಪಾಶೀರ್ವಾದ ಹೊಂದಿ ಸಿರಸಂಗಿಗೆ ಮರಳಿದರು. ಇದು ಸೂರ್ಯ ಪ್ರಕಾಶದಷ್ಟು ಸ್ಪಷ್ಟ ತೋರುವ ಸುಳ್ಳು ಹೇಳಿಕೆಯಾಗಿದೆ. ಏಕೆಂದರೆ! (ಅ) ಶ್ರೀ ಲಿಂಗರಾಜರು ಕ್ರಿ. ಶ. ೨೩-೮-೧೯೦೬ರ ಗುರುವಾರದಂದು ಲಿಂಗದೊಳಗಾಗಿದ್ದಾರೆ.

(ಆ) ಶಿವಯೋಗ ಮಂದಿರವು ಕ್ರಿ. ಶ. ೧೯೦೯ರಲ್ಲಿ ಸ್ಥಾಪಿಸಲ್ಪಟ್ಟಿದೆ ಎಂದು ಅದರ ಸಂಸ್ಥಾಪಕರಾದ ಹಾನಗಲ್ಲ ಕುಮಾರೇಶ್ವರ ಪುರಾಣದಿಂದ ತಿಳಿದು ಬರುತ್ತದೆ. ಈ ಎರಡೂ ಐತಿಹಾಸಿಕ ಘಟನೆಗಳ ಹಿನ್ನೆಲೆಯಲ್ಲಿ ಮೇಲಿನ ಹೇಳಿಕೆಯನ್ನು ಓದಿಕೊಂಡರೆ, ಲಿಂಗರಾಜರು ತಾವು ಲಿಂಗೈಕ್ಯರಾದ ಮೂರು ವರ್ಷಗಳ ನಂತರ ಅಸ್ತಿತ್ವಕ್ಕೆ ಬಂದ ಶಿವಯೋಗ ಮಂದಿರದಲ್ಲಿ ಶ್ರೀ ಕುಮಾರಸ್ವಾಮಿಗಳನ್ನು ಸಂದರ್ಶಿಸಿದರೆಂದು ತಿಳಿಯಬೇಕಾಗುತ್ತದೆ. ಅಂದರೆ ಲಿಂಗೈಕ್ಯ ಲಿಂಗರಾಜರು ಮೂರು ವರ್ಷಗಳ ನಂತರ ತಮ್ಮ ಪಂಚಭೌತಿಕ ಶರೀರವನ್ನು ನೆಲೆಗೊಳಿಸಿದ ಸಮಾಧಿಯಿಂದ ಎದ್ದು ಹೋಗಿ ಕುಮಾರ ಶ್ರೀಗಳನ್ನು ಕಂಡರೆಂದು ತಿಳಿಯಬೇಕಾಗುತ್ತದೆ.

---

ಅಡಿಟಪ್ಪಣೆ : ಇದೇ ಗ್ರಂಥದ ಪುಟ ೭೮ರಲ್ಲಿ "....ಶಿವಯೋಗ ಮಂದಿರದ ಸ್ಥಾಪನೆಯ ಜೊತೆಗೆ ಅಖಿಲ ಭಾರತ ವೀರಶೈವ ಮಹಾಸಭೆ ಅಸ್ತಿತ್ವಕ್ಕೆ ಬಂದಿತು." ಎಂದು ಉಲ್ಲೇಖಗೊಂಡಿದೆ. ಆದರೆ ಶಿವಯೋಗಮಂದಿರವು ಕ್ರಿ. ಶ. ೧೯೦೯ರಲ್ಲಿ ಹುಟ್ಟಿತೆಂದು ಮೇಲೆ

೩

**ಶ್ರೀಮಂತ ಲಿಂಗರಾಜರ ವ್ಯಕ್ತಿತ್ವ :**

ಶ್ರೀ ಮ. ನಿ. ಪ್ರ. ಅನ್ನದಾನೇಶ್ವರ ಪುರಾಣದಲ್ಲಿ ಕವಿಯು ಲಿಂಗರಾಜರ ಭವ್ಯ ವ್ಯಕ್ತಿತ್ವದ ಮಂಗಲಕರವಾದ ದರ್ಶನವನ್ನು ಈ ಪದ್ಯಗಳಲ್ಲಿ ಮಾಡಿಸುತ್ತಾನೆ :

ಕರುಣೈಕನಿಧಿ, ಶೌರ್ಯ–ಧೈರ್ಯಾದಿ ಗುಣಯುತಂ ।
ಪರಮಧರ್ಮಸುಧಾರಕಂ ಪರವಧು ಸಹೋ ।
ದರ ನಿಷ್ಟಲಿಂಗ ಪೂಜಾಪರಾಯಣನ ಭವಸಮಯ ಸೇವಾಧುರೀಣಂ ॥
ಸುರುಚಿರೋದ್ಯತ್ಕೀರ್ತಿ ವಿಭವಪೂರಿತ ಸಕಲ ।
ಹರಿದಂತನಖಿಲ ವಿದ್ಯಾವಿಶಾರದನಮಲ ।
ತರಶಾಂತಿ ದಾಂತಿ ಭೂಷಣ ನಪ್ರತಿಮ ಜಗಜ್ಯೋತಿ ಕಲ್ಯಾಣ ಕಾಯಂ

॥ ಸಂ. ೨೧ ಪ. ೫ ॥

---

ಹೇಳಿರುವದನ್ನು ವಾಚಕರು ಸ್ಮರಿಸಿಕೊಳ್ಳಬಹುದು ಶಿವಯೋಗಮಂದಿರದ ಉದಯದ ಐದು ವರ್ಷದ ಪೂರ್ವದಲ್ಲಿಯೇ ಕ್ರಿ. ಶ. ೧೯೦೪ರಲ್ಲಿ ಅಖಿಲ ಭಾರತ ವೀರಶೈವ ಮಹಾಸಭೆಯ ಪ್ರಥಮ ಅಧಿವೇಶನವು ಸೇರಿತ್ತೆಂಬ ಹಾಗೂ ಮುಂದೆ ೧೯೦೮ರ ಡಿಶೆಂಬರ ೨೮, ೨೯, ೩೦ ದಿನಾಂಕದಂದು ಬಾಗಲಕೋಟೆಯಲ್ಲಿ ಸೇರಿದ ಅದರ ನಾಲ್ಕನೆಯ ಅಧಿವೇಶನದ ಎರಡನೆಯ ನಿರ್ಣಯವು ಶಿವಯೋಗ ಮಂದಿರದ ಸ್ಥಾಪನೆಗೆ ಒಪ್ಪಿಗೆಯನ್ನಿತ್ತಿತೆಂಬ ಸತ್ಯಸಂಗತಿಗಳನ್ನು ಮರೆಯಬಾರದೆಂದು ವಾಚಕರಲ್ಲಿ ವಿನಂತಿ.

ಅಖಿಲ ಭಾರತ ವೀರಶೈವ ಮಹಾಸಭೆಯ ಸ್ಥಾಪಕರು ಹಾನಗಲ್ಲ ಕುಮಾರ ಶ್ರೀಗಳೆಂದು ಜನಜನಿತವಾಗಿದೆ. ಆದರೆ ಕ್ರಿ. ಶ. ೨-೧೧-೧೯೦೮ ರಂದು ಪ್ರಕಟವಾಗಿರುವ ಧಾರವಾಡ ಲಿಂ. ಫಂಡ ಕಮೀಟಿ ಅಂದರೆ ಇಂದಿನ ಲಿಂಗಾಯತ ವಿದ್ಯಾಭಿವೃದ್ಧಿ ಸಂಸ್ಥೆಯ ೨೫ ವರ್ಷದ ವರದಿಯ ಪುಟ ೨೬ರಲ್ಲಿ ಹೀಗೆ ಉಲ್ಲೇಖಿಸಲಾಗಿದೆ ! "...........ಆದ್ದರಿಂದ ಈ ವೀರಶೈವ ಮಹಾಸಭೆ ಎಂಬ ಸಂಸ್ಥೆಗೆ ಜನಕರಾಗಿದ್ದ ಕೈ.ವಾ. ಮ.ರಾ. ರಾ. ಚೆನ್ನಪ್ಪಗೌಡ ಕೊಂಗವಾಡ, ಕ್ಲಾರ್ಕ–ಅಕೌಂಟಂಟ ಕಚೇರಿ ಧಾರವಾಡ ಮತ್ತು ರಾ. ಸಾ. ರೇವಣಸಿದ್ಧಯ್ಯಾ ಕಿತ್ತೂರು ಎಲ್. ಸಿ. ಇ. ಮಾಮಲೇದಾರ ನವಲಗುಂದ ಈ ಉಭಯತರ ಉಪಕಾರವನ್ನು ನಾವು ಯಾವಾಗಲೂ ನೆನಸತಕ್ಕದ್ದಾಗಿದೆ. "

ಇದೇ ವರದಿಯು ಮುಂದುವರಿದು ಪುಟ ೩೧ರಲ್ಲಿ ಹೇಳುವದೇನೆಂದರೆ ! "........ನಮ್ಮ ಲೇಖವನ್ನೂ ಮುಗಿಸುವ ಮೊದಲಿಗೆ ವೀರಶೈವ ಮಹಾಸಭೆಗಳಿಗೆ ಸಂಪೂರ್ಣ ಅಭಿಮಾನ ಶಾಲಿಗಳಾಗಿ ಸಹಾಯವನ್ನು ಮಾಡುತ್ತಿರುವ ಶ್ರೀ ಹಾನಗಲ್ಲ ಕುಮಾರಸ್ವಾಮಿಗಳ ಮತ್ತು ಬೀಳೂರ ಸ್ವಾಮಿಗಳವರ ಉಪಕಾರಗಳನ್ನು ನಾವು ಯಾವತ್ತು ಸಮಾಜದವರೂ ನೆನಸತಕ್ಕದ್ದೆಂದು ಹೇಳದಿರಲಾರೆವು ".

ಈ ಅವತರಣಿಕೆಯಲ್ಲಿ ಪ್ರಯೋಗವಾಗಿರುವ " ವೀರಶೈವ ಮಹಾಸಭೆಗಳಿಗೆ " ಎಂಬ ಪದಗಳು ಆ ಸಂಸ್ಥೆಯ ಸ್ಥಾಪನೆಯ ಕುರಿತಾಗಿರದೆ, ಅದು ಸ್ಥಾಪನೆಗೊಂಡನಂತರ ಜರುಗಿದ ಮಹಾಸಭೆಯ ವಾರ್ಷಿಕ ಅಧಿವೇಶನಗಳಿಗೆ ಆ ಉಭಯ ಮಹಾಸ್ವಾಮಿಗಳು ನೀಡಿದ ಸಹಾಯ ಕುರಿತಾಗಿರುತ್ತವೆ ಎಂಬುದನ್ನು ಓದುಗರು ಮರೆಯದಿರಲೆಂದು ಹಾರೈಸಲಾಗಿದೆ.

ಘನಸದಾಚಾರ, ಸ್ವಾರ್ಥತ್ಯಾಗಿ, ಸುವಿಚಾರಿ ।
ಮನಸಿಜ ಹರಧ್ಯಾನಿ ನಿಷ್ಕಾಮಪದಂ ಭೋಗಿ ।
ಯನಘನಾದೆಮ್ಮ ಶಿರಸಂಗಿಯನು ಪಮಲಿಂಗ ಭೂಪಾಲ ತಿಲಕನು ॥ ೬ ॥

ಈ ಪದ್ಯಗಳಲ್ಲಿ ಕವಿಯು ಇಪ್ಪತ್ತು ಗುಣಲಕ್ಷಣ ವಿಶೇಷಣಗಳನ್ನು ಪ್ರಯೋಗಿಸಿ ಶ್ರೀ ಲಿಂಗರಾಜರ ಭೂಮ ವ್ಯಕ್ತಿತ್ವವನ್ನು ಪ್ರದರ್ಶಿಸಲು ಯತ್ನಿಸಿದ್ದಾನೆ. ಇಲ್ಲಿ ಬಳಿಕೆಯಾಗಿರುವ 'ಅಪ್ರತಿಮ ಜಗಜ್ಯೋತಿ ರೂಪದಲ್ಲಿರುವ ಹಾಗು ಷಟ್‌ಸ್ಥಲಾನು-ಕ್ರಮದಲ್ಲಿ ಲಿಂಗವಂತನು ಪೂಜಿಸುವ ಷಡ್ಲಿಂಗಗಳಲ್ಲಿ ಕೊನೆಯದಾದ 'ಮಹಾಲಿಂಗ' ಸ್ವರೂಪವಾಗಿದ್ದಾರೆ ಎಂದು ಘೋಷಿಸುತ್ತವೆ, ಎಂಬುದನ್ನು ವಾಚಕರು ಮರೆಯದಿರಲಿ ! ಅಂದರೆ ಶ್ರೀ ಮ. ನಿ. ಪ್ರ. ಅನ್ನದಾನೇಶ್ವರ ಮಹಾಶಿವಯೋಗಿಗಳ ಹಾಗೆಯೇ, ಬಸವಾದಿ ಶರಣರಂತೆ ಗೃಹಸ್ಥರಾದ ಶ್ರೀ ಲಿಂಗರಾಜರೂ ಕೂಡ ಲಿಂಗಾಂಗ ಸಮರಸ ಸ್ಥಿತಿಯನ್ನು ತಲುಪಿ ಲಿಂಗಾನಂದದಲ್ಲಿ ಓಲಾಡುತ್ತಿದ್ದರೆಂದು ಸಾರುತ್ತವೆ.

ಕವಿಯ ಈ ವರ್ಣನೆಯು ಯಥಾರ್ಥವಾದುದಾಗಿದೆ. ಏಕೆಂದರೆ ಲಿಂಗರಾಜರು ತಾವು ಶ್ರಮಿಸಿದ ಎಲ್ಲರಾಗಗಳಲ್ಲಿ ಗೈದ ಎಲ್ಲ ಕಾರ್ಯಗಳನ್ನು ಸತ್ಯಶುದ್ಧ ಕಾಯಕವೆಂದೇ ನಿರ್ವಹಿಸಿದ್ದಾರೆ. ಅವುಗಳ ಮೂಲಕ ಜಂಗಮ ಅರ್ಥಾತ್ ಸಮಾಜ, ದೀನ ದಲಿತರ ಆರ್ತರ ಸೇವೆಗೈದು ಜಂಗಮ ದಾಸೋಹಿಗಳಾಗಿದ್ದಾರೆ. ಆದುದರಿಂದ ಲಿಂಗರಾಜರು ಕಾಯಕಯೋಗಿಗಳೂ, ದಾಸೋಹಸಂಪನ್ನರೂ ಆಗಿದ್ದರೆಂದು ನಿಃಸಂದೇಹವಾಗಿ ಹೇಳಬಹುದು. ಕಾಯಕ ದಾಸೋಹಗಳು ಕೂಡಿದಲ್ಲಿ ಅದೇ ಶಿವ ಜೀವಿತ ಕ್ರಮ." ಹೀಗೆ ಲಿಂಗರಾಜರು ಶಿವಜೀವೈಕ್ಯವನ್ನು ಸಾಧಿಸಿದವರು, ಶಿವ ಯೋಗಿಗಳು.

ಪ್ರಸ್ತುತ ಗ್ರಂಥವು ಲಿಂಗರಾಜ ವಿಜಯ ಕಾವ್ಯವಲ್ಲದೆ, ಲಿಂಗರಾಜರಿಗೆ ಸಂಬಂಧಿ-ಸಿದ ನಾಲ್ಕು ಲಾವಣಿ ಹಾಡುಗಳನ್ನು ಒಂದು ಸಖಿಗೀತವನ್ನು ಒಳಗೊಂಡಿದೆ. ಈ ನಾಲ್ಕು ಲಾವಣಿಗಳಲ್ಲಿ ಮೊದಲನೆಯದಾದ "ಆಗ ಬಾರದು ಬಾಳು–ಕೀಳು" ಇದನ್ನು ರಚಿಸಿದವರು ನಮ್ಮ ಸಮಿತಿಯ ಮಾನ್ಯ ಕಾರ್ಯದರ್ಶಿಗಳು, "ಅಕ್ಕನ ಮುಕ್ಕು ಕಾಳು" ದಂಥ ಸರಸ ಕಥಾ ಸಂಗ್ರಹಗಳನ್ನು ಬರೆದವರು, ಸಾಹಿತಿಗಳು ಆದ ಪ್ರೊ. ಎನ್. ಡಿ. ಭಂಡಿವಾಡ ಅವರು. ಎರಡನೆಯದಾದ "ಸಿರಸಂಗಿ ಲಿಂಗರಾಜರು" (ಸಖಿ ಗೀತ ಸಹಿತ) ರಚಿಸಿದವರು ಶ್ರೇಷ್ಠ ಲಾವಣಿಕಾರರಾದ ಶ್ರೀ ಎ. ಆರ್. ಜಂಬಗಿಯವರು. ಮೂರನೆಯದಾದ "ಶ್ರೀ ಲಿಂಗರಾಜ ದೇಸಾಯಿ ಸಿರಸಂಗಿ" ಇದನ್ನು ಒದಗಿಸಿದವರು ಶ್ರೀ ಲಕ್ಕಪ್ಪ ಅ. ಶಿರಹಟ್ಟಿ ಅವರು. ಈ ಮೂರು ಲಾವಣಿಗಳಲ್ಲದೆ ನಾಲ್ಕನೆಯದಾದ "ಶಿವಾ ಮುನಿದಾ ಬೈಸ್ತಾರ ದಿನಾ" ಇದನ್ನು ತಮ್ಮ ಸುಮಧುರ ಕಂಠದಿಂದ ಹಾಡಿ ನಾಡಿನಲ್ಲೆಲ್ಲ ಪ್ರಚುರಪಡಿಸಿದವರು ದಿ. ಗಂಗವ್ವ ಮನಿಕಟ್ಟಿ ಅವರು. ಇವೆಲ್ಲ ಲಾವಣಿಗಳನ್ನು ಧಾರವಾಡ ಆರ್. ಎಲ್. ಎಸ್. ಕಿರಿಯ ಸಂಯುಕ್ತ ಮಹಾ

ವಿದ್ಯಾಲಯದಲ್ಲಿ ಶಿಕ್ಷಕರು, ಹೆಸರಾಂತ ಸಾಹಿತಿಗಳು, ಆದ ಶ್ರೀ ಎ. ಎಸ್. ಹೊಗಾರ ಒದಗಿಸಿ ಮಹದುಪಕಾರ ಮಾಡಿದ್ದಾರೆ. ಈ ಎಲ್ಲ ಲಾವಣಿಕಾರರಿಗೆ ಹಾಗೂ ಸಂಗ್ರಹಿಸಿಕೊಟ್ಟ ಮಹನಿಯರಿಗೆ ನಾವು ಚಿರಋಣಿಯಾಗಿದ್ದೇವೆ. ಈ ಹಾಡುಗಳು ಬಡವರ ಬಂಧುಗಳು ಬೇಡಿದವರ ಭಾಗ್ಯೋದಯವೂ ಆಗಿದ್ದ ಲಿಂಗೈಕ್ಯ ಲಿಂಗರಾಜರ ವ್ಯಕ್ತಿತ್ವದ ಎತ್ತರವನ್ನು ಜನಸಾಮಾನ್ಯರಲ್ಲಿ ಬಿತ್ತರಿಸುವದರಲ್ಲಿ ಸಂದೇಹವಿಲ್ಲ.

ಪ್ರಕಾಶಕರ ಈ ನುಡಿಯಲ್ಲಿ ಬಂದಿರುವ ಎಲ್ಲ ಸಂಶೋಧನಾತ್ಮಕ ಸಂಗತಿಗಳು ಹಾಗೂ ಅವುಗಳಿಗೆ ಸಂಬಂಧಿಸಿದ ವಿವೇಚನೆ, ವಿಮರ್ಶೆ ಮೊದಲಾದವುಗಳನ್ನು ಕುರಿತು ನಮ್ಮ ಸಮಿತಿಯ ಸದಸ್ಯರಾದ ಶ್ರೀ ಎಚ್. ಡಿ. ಚಂದನಗೌಡರ ಅವರು ಸಮಂಜಸ ವಿವರಗಳನ್ನು ಆಧಾರಗಳನ್ನು ಒದಗಿಸಿದ್ದಾರೆ. ಒಟ್ಟನಲ್ಲಿ ಪ್ರಕಾಶಕರ ಈ ನುಡಿಯನ್ನು ರೂಪಿಸಿದ ಶ್ರೇಯಸ್ಸು ಶರಣ ಚಂದನಗೌಡರ ಅವರಿಗೆ ಸಲ್ಲುತ್ತದೆ. ಶ್ರೀ ಚಂದನಗೌಡರ ಅವರಿಗೆ ನಮ್ಮ ಅಭಿನಂದನೆಗಳು. 'ಲಿಂಗರಾಜ ವಿಜಯ, ಕಾವ್ಯದ ಸಾರಾಂಶವನ್ನು ಸುಲಭಗದ್ಯದಲ್ಲಿ ಬರೆದು ಕೊಟ್ಟ ನಮ್ಮ ಸಮಿತಿಯ ಇನ್ನೋರ್ವ ಮಾನ್ಯಸದಸ್ಯರಾದ ಶ್ರೀ ಎಸ್. ಬಿ. ಹಳಕಟ್ಟಿ ಅವರಿಗೆ ನಾವು ಋಣಿಯಾಗಿದ್ದೇವೆ. ಈ ಪುಸ್ತಕ ಪ್ರಕಾಶನದಲ್ಲಿ ಹೆಜ್ಜೆ ಹೆಜ್ಜೆಗೆ ತಲೆದೋರಿದ ತೊಂದರೆಗಳನ್ನು ನಿವಾರಿಸುವಲ್ಲಿ ಸಹಾಯ ಸಹಕಾರ ನೀಡಿದ ಸಮಿತಿಯ ಮತ್ತೊಬ್ಬ ಮಾನ್ಯ ಸದಸ್ಯರಾದ ಶ್ರೀ ಎಸ್. ಬಿ. ಪಾಟೀಲ ಅವರಿಗೆ ಕೃತಜ್ಞತೆಗಳು. ಅದರಂತೆ ನಮ್ಮ ಸಮಿತಿಯ ಸೆಕ್ರೆಟರಿಯವರಾದ ಮಾನ್ಯ ಶ್ರೀ ಎನ್. ಡಿ. ಭಂಡಿವಾಡ ಅವರು ಪ್ರೂಫ ತಿದ್ದುವಲ್ಲಿ ಹಾಗೂ ಇನ್ನೂ ಅನೇಕ ತೆರನಾಗಿ ನೆರವಾಗಿದ್ದಾರೆ. ಶ್ರೀಯುತರಿಗೆ ಕೃತಜ್ಞರಾಗಿದ್ದೇವೆ. ಇದೇ ತೆರನಾಗಿ ಸಮಿತಿಯ ಇನ್ನುಳಿದ ಯಾವತ್ತು ಮಾನ್ಯ ಸದಸ್ಯರು ಸಕ್ರಿಯ ಸಹಕಾರ ನೀಡಿದ್ದಾರೆ. ಇವರೆಲ್ಲರಿಗೂ ನಾವು ಚಿರಋಣಿಯಾಗಿದ್ದೇವೆ. ಈ ಪುಸ್ತಕ ಪ್ರಕಟನೆಗೆ ಧನಸಹಾಯ ನೀಡಿದ ಮಾತೃ ಸಂಸ್ಥೆಯಾದ ಲಿಂಗಾಯತ ವಿದ್ಯಾಭಿವೃದ್ಧಿ ಸಂಸ್ಥೆಗೆ–ವಿಶೇಷವಾಗಿ ಆ ಸಂಸ್ಥೆಯ ಮಾನ್ಯ ಸೆಕ್ರೆಟರಿ ಹಾಗೂ ಕೋಶಾಧಿಕಾರಿಗಳೂ ಆಗಿರುವ ಶರಣ ಎಮ್. ಸಿ. ಬಂಡಿ ಅವರಿಗೆ ನಾವು ಅನಂತ ಕೃತಜ್ಞತೆಗಳನ್ನು ಸಲ್ಲಿಸುತ್ತೇವೆ. ಲಿಂಗೈಕ್ಯ ಲಿಂಗರಾಜರ ಚಿತ್ರವನ್ನು ಬರೆದು ಕೊಟ್ಟ ಶ್ರೀ ಎಂ.ಜಿ. ವಾಚದಮಠ ಅವರಿಗೂ, ಬ್ಲಾಕ್ ತಯಾರಿಸಿದ ಶ್ರೀ ಮಲಕಾಯಿ ಅವರಿಗೂ ಅಲ್ಪಾವಧಿಯಲ್ಲಿ ಅಂದವಾಗಿ ಮುದ್ರಿಸಿಕೊಟ್ಟ ತೋಂಟದಾರ್ಯ ಪ್ರೆಸ್ಸಿನ ಸುಪರಿಂಟೆಂಡೆಂಟ ಶ್ರೀ ಎಸ್. ಜಿ. ಶಿವಾರಿ ಅವರಿಗೂ, ಅವರ ಸಿಬ್ಬಂದಿಯವರಿಗೂ ಸಮಿತಿಯ ಕ್ಲಾರ್ಕ ಶ್ರೀ ಎಸ್. ಬಿ. ಕಲ್ಲನಗೌಡರ ಅವರಿಗೂ ನಮ್ಮ ಕೃತಜ್ಞತೆಗಳು.

**ಆಯ್. ಎಸ್. ಬಿದರಿ,**

ಕಾರ್ಯಾಧ್ಯಕ್ಷರು

ಸಾಹಿತ್ಯ ಸಮಿತಿ

ಲಿಂಗಾಯತ ವಿದ್ಯಾಭಿವೃದ್ಧಿ ಸಂಸ್ಥೆ: ಧಾರವಾಡ

ಸೋಮವಾರ

೩೧–೩–೮೨

## ಲಿಂಗರಾಜ ವಿಜಯ ಕಾವ್ಯ ಕರ್ತೃಗಳ

## ಅರಿಕೆ

'ಲಿಂಗರಾಜ ವಿಜಯ' ಇದೊಂದು ಹೊಸ ಕಾಲದಲ್ಲಿ ಹಳೆಯ ಪದ್ಧತಿಯ ಕಾವ್ಯ. ಶಿರಸಂಗಿಯ ಸರದೇಸಾಯಿ ಲಿಂಗರಾಜರ ಚಾರಿತ್ರಿಕ ಚಿಕ್ಕ ಕಾವ್ಯ. ಇದಕ್ಕೆ ಹಿನ್ನೆಲೆಯಾಗಿರುವ, ಕಾವ್ಯ ರಚನೆಯ ಕರ್ಮಕಥೆ ಹೀಗಿದೆ :

ಲಂಡನ್ನಿನಲ್ಲಿರುವ ಹಿಂದುಸ್ತಾನದ ವರಿಷ್ಠ ನ್ಯಾಯಾಲಯವು (ಪ್ರಿ. ಕೌನ್ಸಿಲ್) ತ್ಯಾಗವೀರ ಲಿಂಗರಾಜರ ಮೃತ್ಯು ಪತ್ರಕ್ಕಿರುವ ವಿರೋಧವನ್ನು ತಳ್ಳಿ ಹಾಕಿತ್ತು. ತ್ಯಾಗವೀರರ ಉನ್ನತಾಶಯವು ಕಾರ್ಯಗತವಾಗುವದಕ್ಕೆ ಅದರ ಟ್ರಸ್ಟ ಕಮೀಟಿ-ಯನ್ನು ರಜಿಷ್ಟರ ಮಾಡಿ ಅಧಿಕಾರ ವಹಿಸಿಕೊಳ್ಳಲು ಮುಂಬಯಿ ಸರಕಾರವು ಆಜ್ಞೆ ಹೊರಡಿಸಬೇಕಾಗಿತ್ತು. ಕ್ರಿ. ಶ. ೧೯೩೭ ರ ಸಮಯ! ಆಗ ನಾನು ವಿಜಾಪುರದಲ್ಲಿ ಶಿಕ್ಷಕನಾಗಿದ್ದೆನು. ಅದಕ್ಕಿಂತ ಕೆಲವು ವರ್ಷಗಳ ಹಿಂದೆ, ಸಂಸ್ಥಾನದ ಗ್ರಾಮವಾದ ಇನಾಮ ಹೊಂಗಲದಲ್ಲಿ ನನ್ನ ಸಂಬಂಧಿಕ ಇನಾಮುದಾರರ ಮನೆಯಲ್ಲಿ ಬಾಲ್ಯವನ್ನು ಕಳೆಯುತ್ತಿದ್ದಾಗ ಲಿಂಗರಾಜ ಸರದೇಸಾಯರ ಜೀವನದ— ಇನ್ನೂ ನೂತನ ವಾರ್ತೆ-ಗಳಾಗಿದ್ದ ಕೆಲವು ಘಟನೆಗಳನ್ನು ಕೇಳಿ ಗೊತ್ತಿದ್ದವು. ಅವೆಲ್ಲವುಗಳು ಈ ನ್ಯಾಯ ತೀರ್ಪು ಪ್ರಸಿದ್ಧಿಸಲ್ಪಟ್ಟ ಸಮಯಃದಲ್ಲಿ ಸ್ಮರಣೆಗೆ ಬಂದು ಅಭಿಮಾನವುಂಟಾಗಿ, ಸರದೇಸಾಯರ ಸಮಗ್ರ ಸಂಗತಿಗಳನ್ನು ಸಂಗ್ರಹಿಸಿ ಬರೆಯಬೇಕೆಂದು ಮನಸ್ಸು ಮಾಡಿದೆನು. ಏನಾದರೂ ಬರೆಯಬೇಕೆಂಬ ಪ್ರಪ್ರಥಮ ಹವ್ಯಾಸ ಬೇರೆ ಆಗ! ಅವರ ಪೂರ್ಣ ಚಾರಿತ್ರಿಕ ವಿಷಯಗಳ ಸಂಗ್ರಹಕ್ಕಾಗಿ, ಅದೇ ಹೊಂಗಲದ ಇನ್ನೊಬ್ಬ ಇನಾಮುದಾರರಾದ ಹಾಗು ನನಗೆ ಹಿರಿಯರೂ ಜ್ಞಾನ ವೃದ್ಧರೂ ಆಗಿದ್ದ ಶ್ರೀ ಬಸಪ್ಪ ನವರು ನಿಸಬತ್ ದೇಸಾಯಿ ಅವರ ಕಡೆಗೆ ಹೋದೆನು. ಅವರು ಸಂಸ್ಥಾನದ ವಿವರ ಬಲ್ಲವರಲ್ಲದೆ ಲಿಂಗರಾಜರ ಗೃಹಜೀವನದ ಕಾರ್ಯಕಲಾಪಗಳಲ್ಲಿ ಅವರ ಸಹವಾಸಿ-ಗಳಾಗಿದ್ದವರು. ಈ ಹಿರಿಯರು ವಾತ್ಸಲ್ಯದಿಂದ ನನ್ನನ್ನು ಏಳು ದಿವಸ ತಮ್ಮ ಮನೆ-ಯಲ್ಲಿಟ್ಟುಕೊಂಡು ಎಲ್ಲ ವಿವರ ನೀಡಿದರು.

ಈ ಟಿಪ್ಪಣಿಗಳನ್ನು ತಂದು ಸುಮಾರು ೪೦೦ ಪುಟಗಳಾಗುವಷ್ಟು ಪುಸ್ತಕ ಬರೆದೆನು. ಅಷ್ಟರಲ್ಲಿ 'ನವಲಗುಂದ ಶಿರಸಂಗಿ ಸರದೇಸಾಯಿ ಚಾರಿಟೇಬಲ್ ಟ್ರಸ್ಟ ಫಂಡು ಬೆಳಗಾಂವ' ಕಾರ್ಯಾಚರಣೆಯಲ್ಲಿ ಬಂದಿತ್ತು. ಈ ಚರಿತ್ರೆಯ ಮುದ್ರಣಕ್ಕೆ ಸಹಾಯ ಧನ ಕೊಡಬೇಕೆಂದು ೧೯೪೫ ರಲ್ಲಿ ಟ್ರಸ್ಟ ಕಮೀಟಿಗೆ ಮನವಿಯನ್ನು ಬರೆದು, ಪುಸ್ತಕದ ಹಸ್ತ ಪ್ರತಿ ಸಹಿತ, ಕಮೀಟಿಯ ಮಾನ್ಯ ಸದಸ್ಯರೊಬ್ಬರಾದ ಶ್ರೀ ಭೀಮನ ಗೌಡರು ಪಾಟೀಲ ಶೀಗುಣಸಿ ಇವರ ಮುಖಾಂತರ ಕಳಿಸಿದೆನು. ಅಧ್ಯಕ್ಷ ಕಲೆಕ್ಟರರು, ಸರದೇಸಾಯರ ಉಯಲಿನಲ್ಲಿ ಪುಸ್ತಕ ಪ್ರಕಟನೆಗೆ ಅಸ್ಪದವಿಲ್ಲವೆಂದು ಮನವಿಯನ್ನು ನಿರಾಕರಿಸಿದರು.

ಮುಂದೆ ಶ್ರೀ ಹರ್ಡೇಕರ ಮಂಜಪ್ಪನವರು ಲಿಂಗರಾಜರ ಚರಿತ್ರೆ ಬರೆಯಲು ಸಿದ್ಧರಾದಾಗ, ನಾನು ವಿಷಯ ಸಂಗ್ರಹಿಸಿಕೊಂಡು ಬಂದುದನ್ನು ಯಾರಿಂದಲೋ ಕೇಳಿದ್ದರು. ಅವರು ರಾ. ಬ. ಫ. ಗು. ಹಳಕಟ್ಟಿ ಅವರಿಗೆ ಪತ್ರ ಬರೆದು, ಆ ಸಂಗ್ರಹವನ್ನು ತಮಗೆ ಕೊಡಿಸಬೇಕೆಂದು ಕೇಳಿಕೊಂಡರು. ನನಗೆ ಮಾನ್ಯ ಹಿರಿಯರಾಗಿದ್ದ ಹಳಕಟ್ಟಿಯವರ ಸೂಚನೆಯಂತೆ, ಹಾಗು ಮಂಜಪ್ಪನವರ ಸಮರ್ಥ ಲೇಖನಿಯಿಂದಲೇ ಚರಿತ್ರೆ ಬರುವದು ಯೋಗ್ಯವೆಂದು ನನಗಾದ ಪ್ರಾಮಾಣಿಕ ಭಾವನೆಯಂತೆ, ಆ ಕೈ ಬರೆಹದ ದೊಡ್ಡ ಪುಸ್ತಕವನ್ನೇ ಅವರಿಗೆ ಕೊಟ್ಟುಬಿಟ್ಟೆನು. ಶ್ರೀ ಮಂಜಪ್ಪನವರು ಮುಖ್ಯವಾಗಿ ಅದನ್ನು ಬಳಸಿಕೊಂಡು 'ತ್ಯಾಗವೀರ ಲಿಂಗರಾಜರ ಚರಿತ್ರೆ' ಎಂಬ ೯೨ ಪುಟಗಳು ಮಾತ್ರ ಉಳ್ಳ ಚಿಕ್ಕ ಪುಸ್ತಕವನ್ನು ೧೯೩೦ ರಲ್ಲಿ ಪ್ರಕಟಿಸಿದರು. ಸಮಗ್ರ ವಿವರಗಳು ಅದರಲ್ಲಿ ಬರಲಿಲ್ಲವೆಂದು ನನಗೆ ಅಸಮಾಧಾನ! ನನ್ನ ಕೈ ಬರೆಹದ ಪುಸ್ತಕವೂ ಮರಳಿ ನನಗೆ ದೊರೆಯಲಿಲ್ಲ, ಅವರಲ್ಲಿ ಅದು ಕಳೆದೇ ಹೋಯಿತು.

ಶ್ರೀ ಮಂಜಪ್ಪನವರಿಗೆ ಅದನ್ನು ಕೊಟ್ಟಾಗಲೇ ನನಗೆ ಭಣ ಭಣ ಎನಿಸಿ ಸುಮ್ಮನೆ ಕೂಡ್ರದೆ, ನನ್ನ ಮನಸ್ಸು ಲಿಂಗರಾಜರ ಜೀವನವನ್ನು ಸಂಕ್ಷೇಪವಾಗಿ ಪದ್ಯಗಳಲ್ಲಿ ರೂಪಿಸಲು ತೊಡಗಿತ್ತು. ಅದುವೇ ಈ 'ಲಿಂಗರಾಜ ವಿಜಯ' ಚಿಕ್ಕ ಕಾವ್ಯ, ಇದಿಷ್ಟೇ ನನ್ನ ಹತ್ತಿರ ಉಳಿಯಿತು. ಇದು ಕೂಡ ಅಂದಿಂದಿಗೆ (೪೩ ವರ್ಷ) ಮುದ್ರ-ಣಕ್ಕೆ ನೆರವು ನೆಲೆ ಕಾಣದೆ ಉಳಿದುಕೊಂಡು ಬಿಟ್ಟದ್ದಿದೆ. ಸದ್ಯಕ್ಕೆ ಇದನ್ನು ಮಹನೀ-ಯರ ಅವಗಾಹನೆಗೆ ತರುವದಕ್ಕಾಗಿ ಅನುಭವ ಮಂಟಪ ಪತ್ರಿಕೆಯ ಆಶ್ರಯದಲ್ಲಿ ಆಗ ತಾತ್ಪೂರ್ತಿಕ ಕರಡು ಮುದ್ರಿಸಿ, ಸಹೃದಯಿಗಳು ಹಾಗೂ ದಾನಿಗಳು ಯಾರಾದರೂ ಇದರ ಮುಂದಿನ ಪ್ರಕಟಣೆಗೆ ನೆರವಾಗಬೇಕೆಂದು ಕೋರಲಾಗಿತ್ತು (ಫೆಬ್ರುವರಿ ೧೯೭೩)ಅಲ್ಲಿಂದೀಚೆಗೆ ಈ ಕರಡು ಅಚ್ಚಿನ ಪ್ರತಿ ತಮ್ಮ ದೃಷ್ಟಿಗತವಾದಾಗ ಶ್ರೀ ಹ. ದೇ. ಚಂದನಗೌಡರ ಅವರು ಇದನ್ನು ಧಾರವಾಡ ಲಿಂಗಾಯತ ವಿದ್ಯಾಭಿವೃದ್ಧಿ ಸಂಸ್ಥೆಯ ಸಾಹಿತ್ಯ ಸಮಿತಿಯ ಸಹಸದಸ್ಯರ ಗಮನಕ್ಕೆ ತಂದರು. ಸಾಹಿತ್ಯ ಸಮಿತಿಯು ಇದನ್ನು ಮುದ್ರಿಸಿ ಪ್ರಕಟಿಸುವದಕ್ಕೆ ಕೈಗೆತ್ತಿಕೊಂಡಿದ್ದರಿಂದ, ಈಗ ಇದಕ್ಕೆ ಪ್ರಸ್ತಾವನೆ ಬರೆದು ಪೂರ್ಣಗೊಳಿಸುವ ಸುಯೋಗ ಒದಗಿದೆ. ಆದ್ದರಿಂದ ಲಿಂ. ವಿ. ಸಂಸ್ಥೆಯ ಸದಸ್ಯರಿಗೂ ನನಗೆ ಕೆಲವು ಹೊಸ ಸಲಹೆ ಸೂಚನೆ ನೀಡಿದ ಶ್ರೀ ಹ. ದೇ. ಚಂದನ-ಗೌಡರ, B. Ag., ಅವರಿಗೂ ನನ್ನ ಕೃತಜ್ಞತೆಯ ಅಭಿವಂದನೆಗಳು.

ತೊರವಿ
ದಿ. ೧೦-೩-೧೯೭೨

ಲಕ್ಕಪ್ಪ ಅ. ಶಿರಹಟ್ಟಿ

## "ಲಿಂಗರಾಜ ವಿಜಯು" ಕಾವ್ಯದ ಸಾರಾಂಶ

ಸಿರಸಂಗಿ ಸಂಸ್ಥಾನದ ಮೂಲಪುರುಷನಾದ ವಿಠ್ಠಪ್ಪನೆಂಬವನು ಅವರಾದಿಯಲ್ಲಿರುತ್ತಿದ್ದನು. ಅವನು ಕಾರಣಾಂತರದಿಂದ ಆ ಊರನ್ನು ಬಿಟ್ಟು ವಿಜಾಪುರದ ಆದಿಲಶಾಹಿಯ ಸೈನ್ಯದಲ್ಲಿ ಸೇರಿಕೊಂಡನು. ವಿಜಯ ನಗರದ ರಾಮರಾಯರೊಡನೆ ರಕ್ಕಸ ತಂಗಡಿಯಲ್ಲಿ ಆದ ಕಾಳಗದಲ್ಲಿ ವಿಠ್ಠಪ್ಪನಾಯಕನ ಕಲಿತನವನ್ನು ಕಂಡ ವಿಜಾಪುರದ ಆದಿಲಶಾಹಿಯರು ಅವರಿಗೆ ಛತ್ರ ಚಾಮರಾದಿಗಳನಿತ್ತು ಗೌರವಿಸಿ ನವಲಗುಂದ ಸಂಸ್ಥಾನಕ್ಕೆ ಒಡೆಯರನ್ನಾಗಿ ಮಾಡಿದರು. ವಿಠ್ಠಪ್ಪನಾಯಕನು ನವಲಗುಂದದಲ್ಲಿದ್ದುಕೊಂಡು ತನ್ನ ಸಂಸ್ಥಾನದ ಮೇಲ್ವಿಚಾರಣೆ ಮಾಡುತ್ತ, ಪ್ರಜೆಗಳನ್ನು ಸುಖ ಸಂತೋಷದಲ್ಲಿ ಇಟ್ಟಿದ್ದನು. ಸಂಸ್ಥಾನದ ಆಡಳಿತವು ಇನ್ನೂರು ವರ್ಷಗಳವರೆಗೆ ನಿರಾತಂಕವಾಗಿ ಸಾಗಿತು. ಈ ಅವಧಿಯಲ್ಲಿಯೇ ಅವರ ಕುಲಗುರುಗಳಾದ ಸಿದ್ಧಗಿರಿಗಳ ಮಠವು ವಿಸ್ತರಿಸಿ ಕಟ್ಟಲ್ಪಟ್ಟಿತು. ಈ ವಂಶದವನಾದ ಜಾಯೇಂದ್ರ ರಾಜಕವಿಯು ಕನ್ನಡದಲ್ಲಿ ಕುವಲಯಾನಂದ ಎಂಬ ಶೃಂಗಾರಕಾವ್ಯವನ್ನು ರಚಿಸಿದನು. ಮುಂದೆ ಟೀಪುವು ನವಿಲುಗುಂದದ ಮೇಲೆ ಆಕ್ರಮಣಮಾಡಿ ಅದನ್ನು ಕೈವಶಮಾಡಿಕೊಂಡನು. ಆದರೆ ನವಿಲುಗುಂದದ ದೊರೆಯು ವೈರಿಗಳ ಕೈಗೆ ಸಿಗದೆ ವೇಷ ಮರೆಯಿಸಿಕೊಂಡು ಅನುಕೂಲ ಸಮಯಕ್ಕಾಗಿ ಕಾಯ್ದಿದ್ದನು. ಇಷ್ಟರಲ್ಲಿ ಆಂಗ್ಲರು ಟೀಪುವನ್ನು ಸೋಲಿಸಿದ್ದರಿಂದ ಈ ನಾಡು ಪೇಶ್ವೆಯರ ಅಂಕಿತಕ್ಕೆ ಸೇರಿತು. ಸಂಸ್ಥಾನವನ್ನು ಕಳೆದುಕೊಂಡ ಜಾಯಪ್ಪದೇಸಾಯರು ಪುಣೆಯ ಪೇಶ್ವೆಯರಲ್ಲಿಗೆ ಹೋಗಿ ತಮ್ಮ ಅಶ್ವಪರೀಕ್ಷೆಯ ಕಲೆಯಿಂದ ಅದರ ಮನವೊಲಿಸಿ ಅವರಿಂದ ತಮ್ಮ ಸಂಸ್ಥಾನವನ್ನು ಮರಳಿ ಪಡೆಯಲು ಪ್ರಯತ್ನಿಸಿದರು. ಪೇಶ್ವೆಯವರು ಜಾಯಪ್ಪದೇಸಾಯರಿಗೆ ಸಿರಸಂಗಿಯನೊಳಗೊಂಡು ಹತ್ತು ಹಳ್ಳಿಗಳನ್ನು ಅವರ ಚರಿತಾರ್ಥಕ್ಕಾಗಿ ಕೊಟ್ಟರು. ನವಿಲಗುಂದವು ಕೈಬಿಟ್ಟನಂತರ ದೇಸಾಯರು ಸಿರಸಂಗಿಯಲ್ಲಿ ಕೋಟೆ ಅರಮನೆಗಳನ್ನು ಕಟ್ಟಿಸಿಕೊಂಡು ಅಲ್ಲಿಯೇ ವಾಸವಾಗಿದ್ದು ಸಂಸ್ಥಾನದ ಮೇಲ್ವಿಚಾರಣೆ ಮಾಡುತ್ತಿದ್ದರು. ಆದರೆ ತರುವಾಯ ಅವರ ಮಗನಾದ ಲಿಂಗೇಶನೆಂಬವರು ಸಂಸ್ಥಾನಕ್ಕೆ ಒಡೆಯರಾದರು. ಅವರ ತರುವಾಯ ಸಂಸ್ಥಾನದ ಪಟ್ಟಕ್ಕೆ ಬಂದ ಜಾಯರಾಯ ದೇಸಾಯರು ನಿಪುತ್ರಕರಾಗಿ ತೀರಿಕೊಂಡಿದ್ದರಿಂದ ಅವರ ರಾಣಿಯರಾದ ಗಂಗಾದೇವಿ ಹಾಗೂ ಉಮಾದೇವಿಯರು ತಮ್ಮ ಸಂಬಂಧಿಕರನ್ನು ದತ್ತಕ ತೆಗೆದುಕೊಳ್ಳುವ ಬಗ್ಗೆ ಪ್ರಯತ್ನಗಳು ನಡೆದುದರಿಂದ ಅವರಿಬ್ಬರಲ್ಲಿ ವಿರಸ ಉಂಟಾಯಿತು. ಆಗ ದೇಸಾಯರ ಅಭಿಮಾನಿಗಳಾದ ಲಿಂಗಪ್ಪ, ಬಸವಾರ್ಯರೂ ಮಂತ್ರಿ ದೇವರಾಯರೂ ಒಟ್ಟಾಗಿ ಒಳ್ಳೆಯ ಕುಲದಲ್ಲಿ ಜನಿಸಿದ ಸಕಲ, ಲಕ್ಷಣಗಳಿಂದ ಕೂಡಿದ ಮಗುವನ್ನು ಬಂಧುವರ್ಗವನ್ನು ಹೊರತುಪಡಿಸಿಯೇ ಆಯ್ಕೆ ಮಾಡಬೇಕೆಂದು ನಿಶ್ಚಯಿಸಿ, ರಾಜವಾಡೆಗೆ

ತಮ್ಮ ಮಕ್ಕಳನ್ನು ದತ್ತಕ ಕೊಡಬಯಸುವವರು ತಮ್ಮ ಮಕ್ಕಳೊಂದಿಗೆ ರಾಜವಾಡೆಗೆ ಬರಬೇಕೆಂದು ಎಲ್ಲ ಕಡೆಗೆ ಡಂಗುರ ಸಾರಿಸಿದರು. ಈ ಸಮಾಚಾರವನ್ನು ಕೇಳಿ ಬೇರೆ ಬೇರೆ ಕಡೆಗಳಿಂದ ಜನರು ತಮ್ಮ ಮಕ್ಕಳನ್ನು ಕರೆದುಕೊಂಡು ಸಿರಸಂಗಿಗೆ ಬರತೊಡಗಿ-ದರು. ಅದರಂತೆ ಲಕ್ಷ್ಮೇಶ್ವರದ ಶಿಗ್ಲಿ ಊರಿನ ಗೂಳಪ್ಪನೆಂಬ ಕೃಷಿಕನು ತನ್ನ ಮಗನಾದ ರಾಮಪ್ಪನೊಡನೆ (ಜನ್ಮ ೧೦-೧-೧೮೬೧) ಸಿರಸಂಗಿಗೆ ಬಂದನು. ಹೀಗೆ ಬಂದವರಿಗೆ ಊರಲ್ಲಿ ಅಲ್ಲಲ್ಲಿ ಉಳಿದುಕೊಳ್ಳುವ ವ್ಯವಸ್ಥೆಯನ್ನು ಮಾಡಿದ್ದರು. ಈ ವ್ಯವಸ್ಥೆಯನ್ನು ನೋಡಲು ಬಂದಾಗ ರಾಮಪ್ಪನು ತಂದೆಯೊಡನೆ ಊಟಕ್ಕೆ ಕುಳಿತಿದ್ದನ್ನು ಕಂಡು ಇದು ಒಳ್ಳೆಯ ಚಿಹ್ನವೆಂದು ಭಾವಿಸಿದರು. ಮುಂದೆ ಎಲ್ಲ ಮಕ್ಕಳನ್ನು ಅರಮನೆಗೆ ಬರಮಾಡಿಕೊಂಡು ಅವರೆಲ್ಲರ ಲಕ್ಷಣಗಳನ್ನು ಪರೀಕ್ಷಿಸಿದರು. ಅವರಲ್ಲಿ ರಾಮಪ್ಪನೇ ಎಲ್ಲ ಲಕ್ಷಣಗಳಿಂದ ಕೂಡಿದವನೆಂದು ತಿಳಿದು ಬಂದುದರಿಂದ ಅವನನ್ನೇ ದತ್ತಕ ತೆಗೆದುಕೊಳ್ಳಬೇಕೆಂದು ನಿಶ್ಚಯಿಸಿ, ಅವನಿಗೆ ಲಿಂಗರಸನೆಂದು ಹೊಸ ಹೆಸರನ್ನಿಟ್ಟರು. ತಾಯಿ ಗಂಗಾದೇವಿಯು ಅವನಿಗೆ ಸ್ವತಃ ಮಂಗಲ ಸ್ನಾನ ಮಾಡಿಸಿ ಮಡಿ ಬಟ್ಟೆ ಉಡಿಸಿ ಸಂತಯಿಸಿದಳು. ನಂತರ ಶುಭಮುಹೂರ್ತದಂದು ನಗರವನ್ನು ಸಿಂಗರಿಸಿ ಎಲ್ಲ ಪ್ರಜೆಗಳು ಒಡಗೂಡಿ ಯುವರಾಜನಿಗೆ ಮಂಗಲ ಸ್ನಾನ ಮಾಡಿಸಿ, ರಾಜಪೋಷಾಕು ತೊಡಿಸಿ, ಸಕಲ ವೈಭವದೊಂದಿಗೆ ನಗರದಲ್ಲಿ ಮೆರವಣಿಗೆಯನ್ನು ಮಾಡಿ, ಅರಮನೆಗೆ ಬಂದು ೨-೬-೧೮೭೨ರಂದು ರಾಜ್ಯಾಭಿಷೇಕವನ್ನು ಮಾಡಿದರು. ರಾಜ್ಯಾಭಿಷೇಕಕ್ಕೆ ಬಂದ ಪ್ರಜೆಗಳು ವಿದ್ವಜ್ಜನರು ತಮ್ಮ ಧನಿಗಳನ್ನು ಕಂಡು ಸಂತೋಷದಿಂದ ಅವರಿಗೆ ಕಾಣಿಕೆಗಳನ್ನು ಸಮರ್ಪಿಸಿದರು. ಅಂದು ಬರಿದಾದ ರಾಜಗದ್ದುಗೆ ಮತ್ತೆ ತುಂಬಿತೆಂದು ಪ್ರಜೆಗಳೆಲ್ಲರೂ ನೆಮ್ಮದಿಯಿಂದ ತಮ್ಮ ಮನೆಗಳಿಗೆ ಮರಳಿದರು.

ರಾಜಕುಮಾರನಿಗೆ ಗಂಗಾದೇವಿಯವರು ವಾಡೆಯಲ್ಲಿಯೇ ವಿದ್ಯಾಭ್ಯಾಸಂಗದ ಏರ್ಪಾಡನ್ನು ಮಾಡಿಸಿದರು. ಪ್ರಾಥಮಿಕ ಶಿಕ್ಷಣವನ್ನು ಪೂರೈಸಿ ನಂತರ ಮುಂದಿನ ವಿದ್ಯಾಭ್ಯಾಸಕ್ಕಾಗಿ ಅವರು ಕರವೀರಪುರಕ್ಕೆ (ಇಂದಿನ ಕೊಲ್ಹಾಪುರಕ್ಕೆ) ಹೋದರು. ಬಿಡುವಿನ ದಿನಗಳಲ್ಲಿ ಅಲ್ಲಿಂದ ಸಿರಸಂಗಿಗೆ ಬಂದಾಗ ಅವರು ತಮ್ಮ ವೇಳೆಯನ್ನು ಹೆಚ್ಚಾಗಿ ತಾಯಿ ಗಂಗಾದೇವಿಯೊಡನೆಯೇ ಕಳೆಯುತ್ತಿದ್ದರು. ಇದರಿಂದ ಗಂಗಾ ದೇವಿಯರಲ್ಲಿ ಲಿಂಗರಾಜರ ಬಗ್ಗೆ ಪ್ರೀತಿ ವಿಶ್ವಾಸಗಳು ಬೆಳೆಯುತ್ತ ಹೋದವು. ಇದನ್ನು ಕಂಡು ಉಮಾದೇವಿಯಲ್ಲಿ ಮಾತ್ಸರ್ಯಭಾವ ಒಡಮೂಡಿದರೂ ಅದನ್ನು ತೋರಗೊಡದೆ ಪ್ರೀತಿ ವಿಶ್ವಾಸಗಳನ್ನು ತೋರಿಸುತ್ತ ತಾವಿರುವ ಬೇವೂರ ಅರಮನೆಗೆ ಅವರನ್ನು ಕರೆಯಿಸಿಕೊಂಡು, ಅವರನ್ನು ಉಪಚರಿಸುತ್ತಿದ್ದರು. ಲಿಂಗರಾಜರು ಅಲ್ಲಿ ಹೆಚ್ಚು ದಿನ ನಿಲ್ಲದೆ ತೀವ್ರವೇ ಸಿರಸಂಗಿಗೆ ಮರಳುತ್ತಿದ್ದರು.

ಹೀಗಿರುತ್ತಿರುವಾಗ ಗಂಗಾದೇವಿಯರ ದೇಹಸ್ಥಿತಿ ತುಂಬ ಕ್ಷೀಣಿಸತೊಡಗಿತು. ಅವರಿಗೆ ತಾವಿನ್ನು ಹೆಚ್ಚು ದಿನ ಬದುಕುವದಿಲ್ಲೆಂದು ತಿಳಿದುಬಂದುದರಿಂದ ಅವರು ತಮ್ಮ

ಮುಂದಿನ ಸಿದ್ಧತೆಯಲ್ಲಿ ತೊಡಗಿದರು. ಲಿಂಗರಾಜರನ್ನು ಕರವೀರಪುರದಿಂದ ಕರೆಯಿಸಿ ಕೊಳ್ಳುವ ವ್ಯವಸ್ಥೆ ಮಾಡಿದರು. ಗಂಗಾದೇವಿಯವರು ತಾವು ಇಹಕ್ಕೆ ಬಂದ ಕಾರ್ಯ ಪೂರೈಸಿತೆಂದು ಲಿಂಗದೊಳಗಾದರು. ಈ ಸಮಾಚಾರವನ್ನು ತಿಳಿದ ಪ್ರಜೆಗಳೆಲ್ಲರೂ ದುಃಖಸಾಗರದಲ್ಲಿ ಮುಳುಗಿದರು. ಲಿಂಗರಾಜರಿಗಂತೂ ಅವರ ಅಗಲುವಿಕೆಯನ್ನು ತಡೆಯುವದು ಅಸಾಧ್ಯವೆನಿಸತೊಡಗಿತು.

ದಿನಗಳುರುಳಿದಂತೆ ಪ್ರಜೆಗಳು ಹಾಗೂ ಲಿಂಗರಾಜರು ತಮ್ಮ ದುಃಖವನ್ನು ತಾಳಿಕೊಳ್ಳುವಷ್ಟು ಸಾಮರ್ಥ್ಯವನ್ನು ಪಡೆದರು. ಮುಂದೆ ಲಿಂಗರಾಜರ ಹಿತಚಿಂತಕರು ಅವರಿಗೆ ಮದುವೆಮಾಡುವ ವಿಚಾರದಿಂದ ಉಮಾದೇವಿಯವರ ಅಪ್ಪಣೆಯನ್ನು ಪಡೆದು ಚನ್ನಮ್ಮ ಹಾಗೂ ಲಿಂಗಮ್ಮರೆಂಬ ಕನ್ಯೆಯರನ್ನು ಶಿರಹಟ್ಟಿ ಹಾಗೂ ಉಕ್ಕಲಿ ಗಳಲ್ಲಿ ಕಂಡು ಅವರಿಬ್ಬರೊಡನೆ ಲಿಂಗರಾಜರ ಮದುವೆಯನ್ನು ಮಾಡಿದರು. ಮದುವೆಗಾಗಿ ಬಂದ ಆಮಂತ್ರಿತರು ಸಂಸ್ಥಾನದ ವಂಶಾಭಿವೃದ್ಧಿಗೆ ಅನುಕೂಲ ವಾಯಿತೆಂದು ನೆಮ್ಮದಿಯಿಂದ ತಮ್ಮ ಮನೆಗಳಿಗೆ ಮರಳಿದರು. ಆದರೆ ಉಮಾ ಬಾಯಿಯವರ ಮನಸ್ಸಿನಲ್ಲಿ ಮಾತ್ಸರ್ಯದ ಕಿಡಿ ಹೊತ್ತಿಕೊಂಡಿತು. ಅವರು ಬೇವೂರಿಂದ ಬಂದು, ಜ್ವರದಿಂದ ಪೀಡಿತರಾದ ಲಿಂಗರಾಜರನ್ನು ಬಂಧನದಲ್ಲಿರಿಸಿ ವಾಡೇಯನ್ನು ತಮ್ಮ ಸ್ವಾಧೀನಕ್ಕೆ ತೆಗೆದುಕೊಂಡರು. ಆದರೆ ಅವರು ಈ ಕಾರ್ಯ ವನ್ನು ಆಂಗ್ಲರ ಒತ್ತಾಯಕ್ಕೆ ಬಿಟ್ಟುಕೊಡಬೇಕಾಯಿತಾದರೂ ಅವರು ತಮ್ಮ ಛಲ ವನ್ನು ಬಿಡದೆ ನ್ಯಾಯಾಲಯಕ್ಕೆ ದೂರನ್ನಿತ್ತು ಲಿಂಗರಾಜರನ್ನು ವಾಡೆಯಿಂದ ಹೊರಗಿಟ್ಟರು.

ಉಮಾಬಾಯಿಯವರಿಗೆ ನ್ಯಾಯಾಲಯದಲ್ಲಿ ತಮ್ಮಂತೆ ತೀರ್ಪು ದೊರೆತಿದ್ದ- ರಿಂದ ಅವರೇ ಸಂಸ್ಥಾನಕ್ಕೆ ಒಡೆಯರಾದರು. ಅವರು ತಮ್ಮ ಬಳಗದವರನ್ನು ವಾಡೆಗೆ ಕರೆಸಿಕೊಂಡು ಸಿದ್ಧರಾಮಯ್ಯನೆಂಬುವವರಿಗೆ ಸಂಸ್ಥಾನದ ವ್ಯವಸ್ಥೆ ನೋಡಿಕೊಳ್ಳಲು ತಿಳಿಸಿದರು. ಲಿಂಗರಾಜರಲ್ಲಿದ್ದ ಹಣವೂ ಖರ್ಚಾಯಿತು. ಲಿಂಗರಾಜರು ತಮ್ಮ ಹೊಂಗಲ ಹಾಗೂ ಇಂಗಳೇಶ್ವರ ಗ್ರಾಮಗಳ ಬಂಧುಗಳಿಂದ ನೆರವನ್ನು ಪಡೆದು ಮುಂಬೈ ಹೈಕೋರ್ಟಿನಲ್ಲಿ ನ್ಯಾಯಬೇಡಿ ಅರ್ಜಿಸಲ್ಲಿಸಿದರು. ಪೇಶ್ವೆಯರಲ್ಲಿದ್ದ ಶ್ರೀ ಶಿವರಾಂ ಪಂತರೆಂಬುವವರಿಂದ ಲಿಂಗರಾಜರಿಗೆ ತುಂಬಾ ನೆರವಾಯಿತು. ಉಮಾ ಬಾಯಿಯವರ ಸಹಾಯಕರಾದ ಸಿದ್ಧಯ್ಯನವರು ಪುಣೆಗೆ ಹೋಗುವಾಗ ದಾರಿಯಲ್ಲಿ ಗಾಡಿಯು ಬುಡಮೇಲಾದುದದರಿಂದ ಅವರು ತೀರಿಕೊಂಡರು. ಇದರಿಂದ ಉಮಾ ಬಾಯಿಯವರ ಶಕ್ತಿಯೇ ಕುಂದಿದಂತಾಯಿತು. ಶ್ರೀ ಶಿವರಾಮ ಪಂತರು ನ್ಯಾಯ ಪೀಠದಲ್ಲಿ ಲಿಂಗರಾಜರೇ ಸಂಸ್ಥಾನಕ್ಕೆ ಒಡೆಯರೆನ್ನುವಂತೆ ವಾದಿಸುವಲ್ಲಿ ಸಮರ್ಥ ರಾದರು. ನ್ಯಾಯಾಲಯವು ಸಿರಸಂಗಿ ಸಂಸ್ಥಾನದ ಒಡೆತನವು ಲಿಂಗರಾಜರದೆಂದು ತೀರ್ಪನ್ನಿತ್ತಿತು. ಲಿಂಗರಾಜರು ೧೮೮೧ ರಲ್ಲಿ ಪುನಃ ಸಿರಸಂಗೀ ಸಂಸ್ಥಾನದ ಅಧಿಕಾರ

ಸೂತ್ರಗಳನ್ನು ವಹಿಸಿಕೊಂಡರು. ಉಮಾಬಾಯಿಯವರು ಬೇವೂರ ವಾಡೇಯಲ್ಲಿಯೇ ಇರತೊಡಗಿದರು. ಅವರ ಉಪಜೀವನಕ್ಕೆ ಲಿಂಗರಾಜರು ಸಾಕಷ್ಟು ಉಂಬಳಿಯನಿತ್ತು ಅವರಿಗೆ ತೊಂದರೆಯಾಗದಂತೆ ನೋಡಿಕೊಂಡರು. ತಮಗೆ ನೆರವಾದ ಶ್ರೀ ಶಿವರಾಮ ಪಂತರನ್ನು ಮಂತ್ರಿಯಾಗಿ ಮಾಡಿಕೊಂಡು ಸಂಸ್ಥಾನದ ಕಾರ್ಯಭಾರವನ್ನು ನೆರವೇರಿಸಿದರು. ಅವರ ಆಡಳಿತದಲ್ಲಿ ಸಿರಸಂಗಿ, ಬೆಳ್ಳೇರಿ, ಹೊಸಬಾಳ, ಹೊಂಗಲ, ಕುರನಕೊಪ್ಪ ಕೆಂಚಗಾರಕೊಪ್ಪ, ಗೋವನಕೊಪ್ಪ, ಕಲ್ಲಾಪೂರ, ಚಿಕ್ಕ ಉಳ್ಳಿಗೇರಿ ಹಾಗೂ ಹೂಲೀಕಟ್ಟಿ ಈ ಹತ್ತು ಗ್ರಾಮಗಳು ಬರುತ್ತಿದ್ದವು. ಇಂಗ್ಲೀಷರು ಲಿಂಗರಾಜರಿಗೆ ಸವದತ್ತಿ ಸೀಮೆಯ ಸಂಸ್ಥಾನದ ಹಳ್ಳಿಗಳಲ್ಲಿ ನಡೆಯುವ ವ್ಯಾಜ್ಯಗಳನ್ನು ನಿರ್ಣಯಿಸುವ ಅಧಿಕಾರವನ್ನು ಅವರಿಗೆ ಕೊಟ್ಟು ಸತ್ಕರಿಸಿದರು.

ಸಂಸ್ಥಾನದ ಅಧಿಕಾರ ಸೂತ್ರಗಳನ್ನು ವಹಿಸಿಕೊಂಡು ಅದನ್ನು' ಸುಧಾರಿಸುವ ಯತ್ನದಲ್ಲಿ ತೊಡಗಿದಾಗ ಅವರ ಸತಿಯರಿಬ್ಬರು ರೋಗದಿಂದ ಪೀಡಿತರಾಗಿ ತೀರಿಕೊಂಡಿದ್ದರಿಂದ ಲಿಂಗರಾಜರಿಗೆ ಅತೀವ ದುಃಖವಾಯಿತು. ಮುಂದೆ ಹಿತಚಿಂತಕರು ತಿಕೋಟಾ ಗ್ರಾಮದ ಭಾಗೀರಥಿಯೆಂಬವಳೊಡನೆ ವಿವಾಹಮಾಡಿದರು. ನಂತರ ಉಕ್ಕಲಿಗ್ರಾಮದ ಗಿರಿಜಾದೇವಿಯನ್ನು ಮದುವೆಯಾದರು. ಕೆಲವು ಕಾಲ ಗತಿಸಿದ ನಂತರ ಗಿರಿಜಾದೇವಿಯವರು ಪುತ್ರರತ್ನವನ್ನು ಹೆತ್ತರು. ವಂಶದ ಕುಡಿ ಉದಯಿಸಿತೆಂದು ಎಲ್ಲರೂ ಸಂತೋಷಪಟ್ಟರು. ಆದರೆ ಈ ಸಂತೋಷ ಬಹಳ ದಿನ ಉಳಿಯಲಿಲ್ಲ. ಒಂದು ತಿಂಗಳೊಳಗಾಗಿ ಆ ಕೂಸು ತೀರಿಕೊಂಡಿತು. ನಂತರ ಭಾಗೀರಥಿ ದೇವಿಯವರು ಗಂಡು ಮಗುವಿಗೆ ಜನ್ಮವಿತ್ತರು. ಅದೂಕೂಡ ಬಹಳ ದಿನ ಬದುಕಿ ಉಳಿಯಲಿಲ್ಲ. ಮುಂದೆ ಅವರ ಹಿತಚಿಂತಕರು ಇಬ್ಬರೂ ಪತ್ನಿಯರ ಅನುಮತಿ ಪಡೆದು ಅಂಕಲಗಿ ಗ್ರಾಮದ ಗಂಗಾಂಬಿಕೆ ಎಂಬವಳನ್ನು ಮದುವೆಯಾದರು. ಭಾಗೀರಥಿಯು ಪುನಃ ಗರ್ಭಧರಿಸಲು ಅವಳನ್ನು ಆರೈಕೆಗಾಗಿ ವಿಜಾಪುರದಲ್ಲಿಟ್ಟರು. ಅವಳನ್ನು ಉಳಿಸಿಕೊಳ್ಳುವದು ಲಿಂಗರಾಜರಿಗೆ ಸಾಧ್ಯವಾಗಲಿಲ್ಲ ಲಿಂಗರಾಜರ ಪ್ರೀತಿಯ ಮಡದಿಯಾದ ಭಾಗೀರಥಿ ದೇವಿಯವರು ಅವರನ್ನಗಲಿದ ನಂತರ ಅವಳ ನೆನಪಿಗಾಗಿ "ಅಮ್ಮಣಗಿ" ಎಂಬಗ್ರಾಮವನ್ನು ಹದಿನೇಳು ಸಾವಿರ ರೂಪಾಯಿಗಳಿಗೆ ಕೊಂಡು ಅದನ್ನು ಧಾರವಾಡ ಲಿಂಗಾಯತ ವಿದ್ಯಾಭಿವೃದ್ಧಿ ಸಂಸ್ಥೆಗೆ ಕೊಟ್ಟರು. ಕೊನೆಯ ಪತ್ನಿಯಾದ ಗಂಗಾಂಬೆಯೂ ಸಾವನ್ನಪ್ಪಿದಳು. ಈ ಘಟನೆಗಳಿಂದ ಲಿಂಗರಾಜರಿಗೆ ಸಂಸಾರದಲ್ಲಿ ವಿರಕ್ತಿಯುಂಟಾಗಲು ಕಾರಣವಾಯಿತಾದರೂ ಅವರು ತಮ್ಮ ಹಿತಚಿಂತಕರ ಒತ್ತಾಯಕ್ಕೆ ಮಣಿದು ಕಲ್ಲುಬೀಳಗಿಯ ಗೌಡರ ಮಗಳಾದ ಸುಂದರಾಂಬೆಯನ್ನು ಮದುವೆಯಾದರು.

ಕೌಟುಂಬಿಕ ಜೀವನದಲ್ಲಿ ಕಾಲಕಾಲಕ್ಕೆ ಒದಗಿಬಂದ ವಿಪತ್ತುಗಳಿಂದ ಅವರು ತಮ್ಮ ಮನಸ್ಸನ್ನು ಜನಹಿತ ಕಾರ್ಯದಲ್ಲಿ ತೊಡಗಿಸಿದರು. ಇವರು ಸಂಸ್ಥಾನದಲ್ಲಿ

ಮಾಡಿದ ಸುಧಾರಣೆಗಳನ್ನು ಕಂಡು ಅರಟಾಳ ರುದ್ರಗೌಡರು ಲಿಂಗರಾಜರನ್ನು ತುಂಬಾ ಕೊಂಡಾಡುತ್ತಿದ್ದರು. ಲಿಂಗರಾಜರು ಒಕ್ಕಲುತನಕ್ಕೆ ಹೆಚ್ಚಿನ ಪ್ರಾಶಸ್ತ್ಯಕೊಟ್ಟು ಅದರಲ್ಲಿ ಅನೇಕ ಸುಧಾರಣೆಗಳನ್ನು ಮಾಡಿದರು. ನಾಡಿನಲ್ಲಿ ಬರಗಾಲ ಬಿದ್ದಾಗ, ಜನರಿಗೆ ಕೆಲಸ ಒದಗಿಸಲು ಸಿರಸಂಗಿ ಹಾಗೂ ಹೊಸಬಾಳ ಗ್ರಾಮುಗಳಲ್ಲಿ ಕೆರೆ ಕಟ್ಟಿಸುವ ಕೆಲಸವನ್ನು, ಕೆಲಸಮಾಡಲು ಆಗದವರಿಗಾಗಿ ಅನ್ನ ಛತ್ರಗಳನ್ನಿಟ್ಟರು. ಅವರು ಅತ್ಯಂತ ದಯಾಮಯಿಯಾಗಿದ್ದರು. ವಸಂತ ಋತುವಿನ ಒಂದು ಮಧ್ಯಾಹ್ನ ಅವರು ತಮ್ಮ ಮಾವಿನ ತೋಟದಲ್ಲಿ ಮರದಡಿಯ ನೆರಳಿನಲ್ಲಿ ವಿಶ್ರಾಂತಿಗೈಯು-ತ್ತಿರುವಾಗ, ಒಬ್ಬಬಾಲಕನು ಹಣ್ಣುಗಳ ಆಶೆಯಿಂದ ಅವುಗಳಿಗೆ ಕಲ್ಲೆಸೆದನು, ಅದು ಲಿಂಗರಾಜರ ತಲೆಗೆ ಬಡಿದು ಘಾಯವಾಯಿತು. ಅವರು ಆ ಹುಡುಗನನ್ನು ಅವನ ತಂದೆಯೊಡನೆ ವಾಡೆಗೆ ಕರೆತರಲು ತಿಳಿಸಿ, ವಾಡೇಗೆ ಹೋದರು ಬಾಲಕ ಹಾಗು ಅವನ ತಂದೆ ತಮಗೆ ಯಾವ ಶಿಕ್ಷೆ ಕಾದಿದೆಯೋ ಎಂದು ಅಂಜುತ್ತ ಸಾಯಂಕಾಲ ವಾಡೇಗೆ ಬಂದರು. ಆಗ ಲಿಂಗರಾಜರು "ಕಲ್ಲಿನ ಪೆಟ್ಟು ಗಿಡಕ್ಕೆ ಬಿದ್ದಿದ್ದರೆ ಅದು ಮಧುರವಾದ ಫಲವನ್ನು ಕೊಡುತ್ತಿತ್ತು. ನಾನು ಬುದ್ಧಿಯಿಲ್ಲದ ಮರಕ್ಕಿಂತ ಕಡೆಯಾಗಲೇ! ಇಲ್ಲ ನಿಮಗೆ ಉಪಜೀವನಕ್ಕಾಗಿ ಜಮೀನನ್ನು ಉಂಬಳಿಯಾಗಿ ಕೊಟ್ಟಿದ್ದೇನೆ. ಇನ್ನು ಮೇಲೆ ಇಂತಹ ಕೆಲಸಮಾಡಬೇಡವೆಂದು ಅವನಿಗೆ ಬುದ್ಧಿವಾದ ಹೇಳಿ ಕಳಿಸಿಕೊಟ್ಟರು. ಇಂಥಹ ಉದಾತ್ತ ವಿಚಾರದ ಮಹಾನು ಭಾವರು ಎಷ್ಟು ಜನ ಇದ್ದಾರೆ? ಹೀಗೆ ಅವರ ಕೃತಿಗಳು ಪ್ರತಿಯೊಂದು ಮಾದರಿ ಯಾಗಿ ಉಳಿದುಕೊಂಡಿವೆ

ಅವರು ಬೆಳಗಾವಿಯಲ್ಲಿ ವಾಸಕ್ಕಾಗಿ ಒಂದು ಬಂಗಲೆಯನ್ನು ಕಟ್ಟಿಸಿದರು ಸಂಸ್ಥಾನದಲ್ಲಿ ಅನೇಕ ವಿದ್ವಾಂಸರಿಗೆ ಕುಶಲ ಹಾಗೂ ಅರಿತ ಕಲೆಗಾರರಿಗೆ ಪ್ರೋತ್ಸಾಹ ವಿತ್ತರು. ಅವರು ಧರ್ಮ ಸಂಸ್ಥೆಗಳಿಗೆ ವಿದ್ಯಾ ಸಂಸ್ಥೆಗಳಿಗೆ ವರ್ಷಾಸನ ಹಾಗೂ ನಿಧಿಗಳನ್ನಿತ್ತರು. ಕಾಶೀ ರಾಮೇಶ್ವರ ಯಾತ್ರೆ ಕೈಕೊಂಡು ಅಲ್ಲಿ ಕಾಣಿಕೆಗಳನ್ನು ಅರ್ಪಿಸಿದರು. ಅವರು ಜನಕ ತಂದೆ ಗೂಳಪ್ಪನವರನ್ನು ಪರಮ ಮಿತ್ರರಾದ ಇಂಗಳೇಶ್ವರದ ರಾಯನಗೌಡರು ಉಕ್ಕಲಿಯ ಭೀಮನಗೌಡರು, ಹೊಂಗಲದ ಬನಪ್ಪ ನವರು, ಮುಂತಾದ ಆಪ್ತಮಿತ್ರರೊಂದಿಗೆ ಸಂಬಂಧವನ್ನಿಟ್ಟುಕೊಂಡು ಸಂಸ್ಥಾನದ ಏಳ್ಗೆಗಾಗಿ ಪರಿಶ್ರಮಿಸಿದರು. ಮನೆತನದಲ್ಲಿಯ ಅನೇಕ ದುಃಖದಾಯಕ ಪ್ರಸಂಗ ಗಳಲ್ಲಿಯೂ ಅವರ ಆಡಳಿತ ಸೂತ್ರದಲ್ಲಿಯ ಆಸಕ್ತಿ, ಅಭಿವೃದ್ಧಿ ಕಡಿಮೆಯಾಗಲಿಲ್ಲ. ಅವರು ಸದಾವ ಕಾಲವೂ ಪ್ರಜಾಹಿತವನ್ನೇ ಕುರಿತು ಚಿಂತಿಸುತ್ತಿದ್ದರು.

ವೀರಶೈವರ ಉದ್ಧಾರಕ್ಕಾಗಿ ವೀರಶೈವ ಮಹಾಸಭೆಯನ್ನು ಸ್ಥಾಪಿಸಿ ಅದರ ಎರಡು ಅಧಿವೇಶನಗಳಿಗೆ ಅಧ್ಯಕ್ಷರಾಗಿ ಆಯ್ಕೆಗೊಂಡು ಸನ್ಮಾನಿತರಾದರು. ಅವರು ಧಾರವಾಡದಲ್ಲಿ ೧೩-೫-೧೯೦೪ ರಂದು ನಡೆದ ಮೊದಲನೆಯ ಮಹಾಸಭೆಯ ಅಧ್ಯಕ್ಷ

ಸ್ಥಾನದಿಂದ ಮಾತನಾಡುತ್ತ “ ನನ್ನ ಸಾವಿನಿಂದ ಸ್ವಮತಹಿತವು ಸಾಧಿಸುತ್ತಿದ್ದರೆ ನಾನು ಸಂತೋಷದಿಂದ ಸಾಯುವೆ” ಎಂದು ಘೋಷಿಸಿ ಸ್ವಮತಾಭಿಮಾನವನ್ನು ವ್ಯಕ್ತಪಡಿಸಿದರು. ಮುಂದಿನ ಅವರ ಜೀವನವನ್ನು ಅವಲೋಕಿಸಿದರೆ ಈ ನುಡಿಯು ಭವಿಷ್ಯವಾಣಿಯಾಗಿಯೇ ಪರಿಣಮಿಸಿತೆಂಬುದನ್ನು ನಾವು ಮನಗಾಣಬಹುದು, ಪುನಃ ೨-೧೨-೧೯೦೫ ರಲ್ಲಿ ಸೇರಿದ ಎರಡನೆಯ ವೀರಶೈವ ಮಹಾಸಭೆಯ ಅಧ್ಯಕ್ಷಸ್ಥಾನವೂ ಅವರಿಗೇ ಸಲ್ಲಿತು—ಹೀಗೆ ಜನಹಿತ ಕಾರ್ಯದಲ್ಲಿ ತೊಡಗಿದ ಲಿಂಗರಾಜರಿಗೆ ಅಜೀರ್ಣ ರೋಗ ಸೇರಿಕೊಂಡಿತು. ಅದು ಉಪಚಾರದಿಂದ ಗುಣ ಹೊಂದದೆ ಕ್ಷಯರೋಗಕ್ಕೆ ತಿರುಗಿಕೊಂಡಿತು. ಅವರು ಬೆಳಗಾಂವಿಗೆ ಉಪಚಾರಕ್ಕಾಗಿ ಹೋದರು. ಎಷ್ಟೋ ಉಪಚಾರಮಾಡಿದರೂ ರೋಗ ಹಿಡಿತಕ್ಕೆ ಬಾರದೆ ಹೋಯಿತು. ಲಿಂಗರಾಜರು ತಾವಿನ್ನು ಉಳಿಯಲಾರೆನೆಂದು ತಿಳಿದು ೬-೬-೧೯೦೬ ರಂದು ಒಂದು ಮೃತ್ಯು ಪತ್ರ ವನ್ನು ಬರೆದು ಬೆಳಗಾಂವಿಯ ಸರಕಾರಿ ಅಧಿಕಾರಿಗಳಿಗೆ ಒಪ್ಪಿಸಿ ಸಿರಸಂಗಿಗೆ ಬಂದರು. ಅಲ್ಲಿಂದ ನವಿಲುಗುಂದಕ್ಕೆ ಹೋದರು. ಅಲ್ಲಿಯೂ ರೋಗ ಹಿಡಿತಕ್ಕೆ ಬಾರದಿರಲು ಮರಳಿ ಸಿರಸಂಗಿಗೆ ಬಂದು ಎಲ್ಲರನ್ನು ಕರಿಸಿ ದರ್ಶನವನ್ನಿತ್ತು, ಎಲ್ಲರನ್ನು ಕಣ್ತುಂಬ ನೋಡಿ, ಶಿವನನ್ನು ಸ್ಮರಿಸುತ್ತ ೨೩-೮-೧೯೦೬ ರಂದು ಇಹಲೋಕ ಯಾತ್ರೆಯನ್ನು ಮುಗಿಸಿದರು. ಅವರ ಅಗಲುವಿಕೆಯಿಂದ ಅನಾಥರಾದೆವೆಂದು ಜನ ದುಃಖಿಸಿದರು. ಅವರಲ್ಲಿ ಕೆಲವರು ಲಿಂಗರಾಜರು ಸಂತಾನ ರಹಿತವಾಗಿ ತೀರಿಕೊಂಡದ್ದರಿಂದ ಅವರ ತರುವಾಯ ಸಂಸ್ಥಾನಕ್ಕೆ ಯಾರು ಒಡೆಯರೆಂದು ಚಿಂತಿಸತೊಡಗಿದರು. ಅವರು ಬರೆದು ಇಟ್ಟ ಮೃತ್ಯುಪತ್ರವನ್ನು ನೋಡಿದಾಗ ಪರಮಾಶ್ಚರ್ಯ ಎಲ್ಲರಿಗಾಗಿ ಕಾಯ್ದಿತ್ತು. “ಅವರು ತಮ್ಮ ಆಸ್ತಿಯನ್ನೇ ಸಮಾಜದ ಬಡಮಕ್ಕಳ ಶಿಕ್ಷಣಕ್ಕಾಗಿ ದಾನವಾಗಿತ್ತು ಜಗತ್ತಿನ ದಾನಿಗಳಲ್ಲಿ ಅಗ್ರಗಣ್ಯರಾದರು. ಮಿಕ್ಕವರು ಕೇಳಿದುದನ್ನು ಕೊಟ್ಟು ಶ್ರೇಷ್ಠದಾನಿಗಳೆನ್ನಿಸಿಕೊಂಡರೆ ಲಿಂಗರಾಜರು ಕೇಳದೆಯೇ ದಾನವನ್ನಿತ್ತರು. ಬೇಡಿ ಪಡೆವದಾನ ಸೀಮಿತ ಸಂತೃಪ್ತಿಯದು ಬೇಡದೇ ಸತ್ಪಾತ್ರದಲ್ಲಿ ಕೊಡುವ ದಾನದ ಹಿರಿಮೆ ಹೆಚ್ಚಾದುದು. ಅದರಲ್ಲಿಯೂ ಜ್ಞಾನದ ಬೆಳಕನ್ನಿತ್ತು ಆತ್ಮೋದ್ಧಾರಕ್ಕೆ ಅಣಿ ಗೊಳಿಸುವ ವಿದ್ಯಾದಾನಕ್ಕೆ ನೆರವು ನೀಡುವುದನ್ನು ಬೇರೊಂದಕ್ಕೆ ಹೋಲಿಸಿ ಹೇಳುವದು ಸಮಂಜಸವಲ್ಲ. ಹೀಗೆ ಅವರು ಮಕ್ಕಳಿಲ್ಲದೆ ಅಸುನೀಗಿದರೂ ಸಂಸ್ಥಾನದ ಹೆಸರು ಅಜರಾಮರವಾಗಿ ಉಳಿಯುವಂತೆಯೂ ಎಂದೆಂದಿಗೂ ಸಂಸ್ಥಾನ ಮಕ್ಕಳಿಲ್ಲದಂತೆ ಆಗದ ಲಕ್ಷಾವಧಿ ಮಕ್ಕಳನ್ನು ಪಡೆದು ಲಿಂಗರಾಜರು ಧನ್ಯರಾದರು. ಅದಕ್ಕೆಂದೇ ಅವರು ತ್ಯಾಗವೀರ ಸಿರಸಂಗಿ ಲಿಂಗರಾಜರೆಂದು ಕೀರ್ತಿ ಪಡೆದರು. ಇದು ಈ “ಲಿಂಗರಾಜ ವಿಜಯ” ಕಾವ್ಯದ ಸಂಕ್ಷಿಪ್ತ ಸಾರಾಂಶವೆಂದು ಹೇಳಬಹುದು.

ಇನ್ನು ಲಿಂಗರಾಜರ ಜೀವನ ಚರಿತ್ರೆಯಿಂದ ನಾವೊಂದು ಸಂಗತಿಯನ್ನು ಸದಾವ ಕಾಲವೂ ನೆನಪಿನಲ್ಲಿಟ್ಟುಕೊಳ್ಳಬೇಕಾಗಿದೆ. ಅವರು ಬಡರೈತರ ಕುಟುಂಬದಿಂದ

ಸಂಸ್ಥಾನಕ್ಕೆ " ದತ್ತಕ "ಕ್ಕೆ ಬಂದರು. ಇವರಿಂದ ಅವರ ಬಂಧುಬಳಗ ಶ್ರೀಮಂತ ವಾಗಲಿಲ್ಲ. ತಂದೆ ತಾಯಿಗಳು ಅವರನ್ನು ಸಂಸ್ಥಾನಕ್ಕೆ " ದತ್ತ " ಕೊಟ್ಟರೆ, ಅವರು ಸಂಸ್ಥಾನವನ್ನು ಸಮಾಜಕ್ಕೆ "ದತ್ತ" ಕೊಟ್ಟು ಮಹಾದಾನಿಗಳಾದರು. ಅದೂ ಅಲ್ಲದೇ ಅವರು ಸಮಾಜದ ಅಭಿವೃದ್ಧಿಗಾಗಿ ಎಲ್ಲರಿಗೂ ಎಲ್ಲಕ್ಕಿಂತಲೂ ಪ್ರೀತಿಯ ವಸ್ತುವಾದ ಪ್ರಾಣವನ್ನು ತ್ಯಾಗಮಾಡಲು ಸಿದ್ಧರಾದುದನ್ನು ನೋಡಿದರೆ ಅವರಿಗೆ ಸಮಾಜದ ಉತ್ಕರ್ಷದ ಉತ್ಕಟೇಚ್ಛೆ ಎಷ್ಟಿದ್ದಿತ್ತೆಂಬುದರ ಅರಿವು ನಮಗೆ ಆಗದಿರದು. ಸಮಾಜ ಸಮೃದ್ಧವಾದರೆ ಅದು ಯಾರನ್ನಾದರೂ ಎತ್ತಿ ಹಿಡಿಯಬಲ್ಲದು. ಅದೇ ಬಡವಾದರೆ ಮುಂದೆ ನಮ್ಮ ಗತಿಯೇನು ? " ಜಗವೆಲ್ಲಾ ನಗುತಿರಲಿ ಜಗದಳಲು ನನಗಿರಲಿ " ಎಂಬ ಕವಿವಾಣಿ ಇದನ್ನು ಹೇಳುವದಿಲ್ಲವೆ? ಸಮಾಜವನ್ನು ಮುರಿದು ತಿನ್ನುವ ಜನರೆ ಹೆಚ್ಚುತ್ತಿರುವ ಈ ಮಾತಿನ ಅರಿವು ಎಲ್ಲರಲ್ಲಿ ಮೂಡಿಬೆಳೆಯುವಂತೆ ಆ ಪರಾತ್ಪರ ಶಕ್ತಿಯು ಎಲ್ಲರಿಗೂ ಸದ್ಬುದ್ಧಿಯನ್ನೀಯಲಿ.

**—ಎಸ್. ಬಿ. ಹಳಕಟ್ಟಿ,**
ಧಾರವಾಡ

# ಪ ರಿ ವಿ ಡಿ



ತ್ಯಾಗವೀರ ಸಿರಸಂಗಿ ಲಿಂಗರಾಜರು



ಜನನ : ೧೦-೧-೧೮೬೧ ಲಿಂಗೈಕ್ಯ : ೨೩-೮-೧೯೦೬

ಶ್ರೀ ಲಕ್ಕಪ್ಪ ಅ. ಶಿರಹಟ್ಟಿ

ವಿರಚಿತ

# ಲಿಂಗರಾಜ ವಿಜಯ

(ಕಾವ್ಯ)

# ಲಿಂಗರಾಜ ವಿಜಯ
## (ನವಿಲುಗುಂದ ಶಿರಸಂಗಿ ಸರದೇಸಾಯಿಗಳು)

ವಾ. ಷಟ್ಪದಿ



### ಪೀಠಿಕೆ.

ಶ್ರೀಮದಮರಾವಳಿಯು ಸಲೆಕಂಡು ಭಯಗೊಂಡು ।
ನೇಮುಗೆಟ್ಟೋಡೆ, ದಾನವರ ಕಟ್ಟೊಡೆಯೆ, ಮ- ।
ತ್ತಾ ಮುನಿವ್ರಾತಮುಸುಗುಂದಿ ಭಯದಿಂ ಚದರೆ, ವಿಶ್ವ ವಿಧ್ವಂಸಿಸುತಿರೆ ॥
ಆ ಮಹಾಪ್ರಳಯದೋಳುಮಳ್ಕದೋರ್ವನೆ ನಗೆಯಿ- ।
ನಾಮೋದದಿಂದಚಲ ಶಾಂತಿಯಿಂದೀಕ್ಷಿಸುವ ।
ಸೋಮಶೇಖರನೀವುದೆಮಗಮಲ ಸುಮತಿ ಸದ್ಭಕ್ತಿ ಸುಖಗಳ ರಾಗದಿ ॥ ೧ ॥

ಕರೆದು ತನ್ನಂ ದೈವವರಸುತನಮಂ ತನ್ನ ।
ಕರಕೀಯಲದರೊಡನೆ ಜನಿಸಿ ಬಹ ಕಡುಕಷ್ಟ- ।
ಕರ ಘಟನೆಗಳ ಧೈರ್ಯದಿಂ ಸಹಿಸಿ, ಹಿತಚಿಂತಕರ ನೆರವಿನಿಂ ನೀಗುತ ॥
ಪೊರೆದನನುರಾಗದಿಂ ಪ್ರಜರ, ಬುಧಜನರೊಲಿವ ।
ತೆರದಿ ಸದ್ಧರ್ಮದೀಪ್ತಿಯ ಬೆಳಗಿ, ತ್ಯಾಗದಲಿ ।
ಸರಿದೊರೆಗಳಿಲ್ಲೆನಿಸಿ ಸತ್ಕೀರ್ತಿಕಾಯನಾದನು ಲಿಂಗರಾಜೇಂದ್ರನು ॥ ೨ ॥

ಮೇದಿನಿಗೆ ಪೊಸತಿದಚ್ಚರಿಯೆನಿಪ ಬಗೆಯಿಂದ- ।
ಲೌದಾರ್ಯಮಂ ಮೆರೆದು ಸದ್ಭಾವ ಸಂಪನ್ನ- ।
ನಾದ ಶಿರಸಂಗೀಶ ಲಿಂಗಭೂಪಾಲಕನ ವಿಲಸಚ್ಚರಿತಸಾರವ ॥
ಓದುಗರ ಕರ್ಣಮಧುರವನೆಸಗಲವ್ವಳಿಸಿ, ।
ಮೋದದಿಂ ಪೇಳ್ದಪೆಂ ಮನ್ಮತಿಗೆ ತಕ್ಕವೊಲು ।
ಸಾದರದಿ ಕೈಕೊಳ್ವುದಿದನು ಕುಂದುಗಳನುಳಿದಖಿಲ ಸಜ್ಜನ ನಿಚಯವು ॥ ೩ ॥

## ಪೂರ್ವಜರು

ಕಾಲಕಾಲದೊಳಡರಿಬರ್ಪ ಸಂಸಾರದ– ।
ಲ್ಲೋಲಕಲ್ಲೋಲವಾಗಿರ್ಪ ದುರ್ಧರ ಸಮಯ ।
ಮಾಲೆಯಲಿ ಬಳಲಿ ತನ್ನೂರನೇ ತೊರೆದನವರಾದಿಯೆಂಬೂರಿನ ॥
ಆಳಿದಂ ವಿಠ್ಠಪ್ಪನೆಂಬವಂ ಯವನಭೂ- ।
ಪಾಲನನುಸಂಧಾನದಿಂ ಸೇನೆಯೊಳು ಸೇರಿ ।
ಬಾಳುತಿರೆ ಕಲಿಯಾಗಿ ಕರ್ತವ್ಯನಿಷ್ಠೆಯಿಂ, ಕಲಿತನಕೆ ಸಿರಿಯೊಲಯಳೇ ? ॥ ೪ ॥

ವಿಜಯಪುರದೊಳಗಿಂತು ಪಾತುಶಹನೆಡೆಯೊಳಿಹ ।
ವಿಜಿತವೀರಾರಾತಿ, ವಿಖ್ಯಾತ ವಿಕ್ರಾಂತ ।
ವಿಜಿತಶ್ರಮಂ ವಿನುತ ವಿಪುಲವಿವಿಧಾಯುಧ ವಿಶಾರದಂ ವಿಮಲಾಂಗನು ॥
ವಿಜಯಲಕ್ಷ್ಮೀವರಂ ವಿಠ್ಠಪ್ಪನಾಯಕಂ ।
ವಿಜಯನಗರದ ರಾಯರೊಡನಾದ ಕಾಳಗದಿ ।
ವಿಜಯವಂ ಪಡೆದನುಭಯಪ್ರಬಲಭಟರಂದು ನಿಬ್ಬೆರಗಿನಿಂ ನೋಡಿರೆ ॥ ೫ ॥

ಮೆಚ್ಚಿದಂ ವಿಠ್ಠಪ್ಪನಾಯಕನ ಪಾತುಶಹ ।
ನಚ್ಚಿ ಪೊಗಳಿದನವನ ಭುಜಬಲವ ಬಗೆದಂದು ।
ನಿಚ್ಚಯಂ ಜಿತಶತ್ರುಸಂದೋಹನಿವನೆಂದು ಸಾರಿಸುತ ಸಾದರದೊಳು, ॥
ಚಚ್ಚರದಿ ನವಿಲುಗುಂದಾದಿ ಬಹು ಜನಪದವ ।
ನೊಚ್ಚತಂಗೊಟ್ಟು ಲೇಖನವ ಬರೆಯಿಸಿ ಸಲಿಸಿ ।
ನಿಚ್ಚವುವನನ್ವಯದಿ ನಡೆಯುವಂತೆಸಗಿದಂ ಛತ್ರಚಾಮರಗಳೊಡನೆ ॥ ೬ ॥

ಪಡೆದ ಭೂಮಿಗೆ ನವಿಲುಗುಂದ ಮುಖ್ಯ ಸ್ಥಾನ ।
ಗಡಮೆಂದು ಗೈದು, ತಾನಲ್ಲಿರುತ ವಿಜಯಪುರ ।
ದೊಡೆಯಗಾವಾಗಾಗ ಬೆಂಬಲವನೀಯುತಂ ತನ್ನಿಳೆಯನುಂ ಪೊರೆಯುತ ॥
ಅಡಗಿಸಿದನಾರಾತಿಗಳ ಛಲವ, ಜನರ ಸುಖ- ।
ಕೆಡೆಯಾಗುವಂತೆಸಗಿದಂ ರಾಜಮಂ, ಪಡೆದು ।
ಬಡಜನರ ಹರಕೆಯಂ, ಕೈಲಾಸಕಡರಿದಂ ರಾಜವರ ವಿಠ್ಠಪ್ಪನು ॥ ೭ ॥

ಆ ರಾಯನನ್ವಯದೊಳುದ್ಭವಿಸಿ, ನೀತಿಯಿಂ, ।
ವೀರಶೈವಾಚಾರ ಸಂಪನ್ನರೆಂದೆನಿಸಿ, ।
ವೀರಭೂಮಿಪರು 'ಕೊಡುತಿಹ ಕೃಷೀವಲರೆ'ಂಬ ಪೆಸರ ನಿಜವಂ ಗೈಯುತ ॥

ಆ ರಾಜ್ಯಮಂ ನಿರಾತಂಕದಿಂ ಪೊರೆದರಿ ।
ನ್ನೂರುವರ್ಷಂ; ಸಿದ್ಧಗಿರಿಯ ಕುಲಗುರುವಿನೊಳ- ।
ಪಾರ ಭಕ್ತಿಯನಿರಿಸಿ, ಮಠವ ವಿಸ್ತರಿಸಿ ಕಟ್ಟಿಸಿ, ಸೇವಿಸುತ್ತಿರ್ದರು ॥ ೮ ॥

ತನ್ನೃಪರೊಳಭಿಜಾತ ವಿಬುಧೇಂದ್ರ ರಸಿಕಮಣಿ ।
ಸನ್ನುತ ವಿಶಾಲಮತಿ ಜಾಯೇಂದ್ರ ರಾಜಕವಿ ।
ಕನ್ನಡದಿ ಕುವಲಯಾನಂದ ಶೃಂಗಾರ ಕಾವ್ಯವ ರಚಿಸಿ ಸಂತಸಮಿರೆ ॥
ಅನ್ನೆಗಂ ಮೈಸೂರ ನೃಪರಿಂದ ರಾಜ್ಯಮಂ ।
ತನ್ನಾಧೀನಕೆ ಕೊಂಡ ಹೈದರನ ಮಗ ಟೀಪು ।
ಅನ್ಯಾಕ್ರಮಣಕೆಳಸಿ ದಲವೆರಸಿ ಬಂದೆರಗಿ ನವಿಲುಗುಂದವ ಗೆಲ್ದನು ॥ ೯ ॥

ಸೋತಬಳಿಕಾ ಸಮರದಲಿ ನವಿಲುಗುಂದ ಭೂ- ।
ಕಾಂತನಾ ವೈರಿಗರಿಯದ ತೆರದಿ ಪೋಗಿ ವೇ- ।
ಷಾಂತರದಿ ವಿಮಲಧರ್ಮಪ್ರಾಣಗಳ ಕಾಯಲೆಂದಾಗ ಕೆಲಕಾಲವ ॥
ಕಾಂತಾರದೊಳಗಲೆದು, ದಲವನೊಂದಣಿಗೊಳಿಸಿ, ।
ಕಾತರದಿ ಸಮಯಾನುಕೂಲಕಂ ಕಾಯ್ದಿಹಂ; ।
ಭೂತಳದೊಳಾರು ಮೀರದ ದೈವದಾಟವೇ ಬೇರಾಯ್ತುದೇವೇಳ್ವೆನು ॥ ೧೦ ॥

ಇಂತಿರಲ್ಕನಿತರೊಳಗಾಂಗ್ಲರು ಮಹಾರಾಷ್ಟ್ರ- ।
ರಂತಿರುವ ಟೀಪುವಿನ ವರ್ತನಕೆ ಶತ್ರುತ್ವ- ।
ವಾಂತು ಸಮರದೊಳವನ ನಿರ್ಮೂಲಮಾಡಿ ನಾಡಿನೊಳೆಸಗಿದರು ಪಸುಗೆಯ ॥
ಅಂತೆಸಗೆ ನವಿಲುಗುಂದದನಾಡು ಪುಣೆಯ ಶ್ರೀ ।
ಮಂತ ಪೇಶ್ವೆಯರಂಕಿತಕೆ ಸೇರಲೊಡನವರು ।
ಮುಂತೆ ತಾವೆಸಗಿರ್ದ ಸಾಲದೊಳಗಡವಿತ್ತರಂದೆಯೀ ಪೊಸನಾಡನು ॥ ೧೧ ॥

ಇನಿತು ಸಂಕಟದೊಳಂ ಪದಭ್ರಷ್ಟಜಾಯ- ।
ಜನಪಂ ಕಲಾವಿದಂ ಕುಶಲಮತಿ ಕೃತಮುಖಂ ।
ವಿನಯಯುತನಾಗಿರ್ದು ಪೇಶ್ವಾಯಿಯಿಂ ತಮ್ಮ ರಾಜಮಂ ಪಡೆಯಲೆಂದು ॥
ಪುಣೆಗೆ ಬಂದಲ್ಲಿ ಪಲಬರ ನೇಹದಿಂ ಕಂಡು, ।
ತನಗಿರುವ ಹಯಪರೀಕ್ಷಾದಿ ಕಲೆಗಳ ತೋರಿ ।
ಮನವೊಲಿಸಿ ತನ್ನ ಬಯಕೆಯನರುಹಿದಂ ಕಾಲವರಿದು ಶ್ರೀಮಂತರೆಡೆಗೆ ॥ ೧೨ ॥

ಒಲುಮೆಯಿಂ ಪೇಶವೆಯು, ನವಿಲುಗುಂದದ ಭೂಮಿ- ।
ಯುಳಿದಿಲ್ಲವಡವಿನಿಂ ಬಿಡಿಸಿಕೊಡುವೆವು ಮುಂದೆ ।
ಕೆಲದಿವಸಕನ್ನೆವರಮಿತ್ತಪೆವು ಪತ್ತ್ರುರುಗಳ ನಿಮ್ಮ ಚರಿತಾರ್ಥಕೆ ॥
ಬಳಲದಿರಿ ನೀವೆಂದು ಸಂತೈಸಿ ಸತ್ಕರಿಸಿ ।
ಕಳುಪಿದಂ ಶಿರಸಂಗಿ ಮೊದಲಾದ ಪತ್ತ್ರು- ।
ಗಳನಿತ್ತು; ಮುಃರಿದಾರಾಂಗ್ಲರು ಪೇಶ್ವೆಯರ ಬಳಿಕ; ನವಿಲುಗುಂದುಳಿದುದತ್ತ ॥ ೧೩ ॥

ನವಿಲುಗುಂದದ ನಾಡೆ ಪೋಗುಲಂತಿಂತು ಸಂ- ।
ಭವಿಸಿದುದು ಶಿರಸಂಗಿ ಸಂಸ್ಥಾನಮೆನೆ ಜಾಯು- ।
ಭುವನೇಶ ಶಿರಸಂಗಿಯೊಳೆ ಕೋಟೆಯರಮನೆಗಳಂ ಕಟ್ಟಿ ನಾಡನಾಳಿ ॥
ಅವಸಾನವೊಂದಲವನಣುಗ ಲಿಂಗೇಶನೆಂ- ।
ಬವನಾಳಿ ಪರಗತಿಗೆ ಪಾರಲಾತನ ತನೂ- ।
ಭವ ಜಾಯರಾಯ ಸರದೇಸಾಯರೆಂಬ ಪದವಾಂತನಾಳಿದನೆಂತೆನೆ ॥ ೧೪ ॥

ಧನವು ತನಗಿಹುದೆಂದು ಮದವನ್ನು ತೋರ- ।
ದೆನಿತುಮೆಂದುಂ ವ್ಯಸನಕೆಳಸದೆ ವಿವೇಕದಿಂ ।
ತನುಚಿತ್ತವಿತ್ತಗಳ ದಾಸೋಹದಲಿ ಸಲಿಸಿ ಸಾರ್ಥಕಂಗೊಳಿಪನಾಗಿ ॥
ಅನಘನಾಚಾರಸಂಪನ್ನನುತ್ತಮನಾಗಿ ।
ಮನವಾರೆ ಲಿಂಗಾರ್ಚನಾತಿಸುಖರತನಾಗಿ ।
ಜನವನನುರಾಗದಿಂ ತನುಜಾತರಂತೆವೊಲು ಸಲಹಿದಂ ವಿನುತನಾಗಿ ॥ ೧೫ ॥

## ದೈವದಾಟ

ಶಿರಸಂಗಿಯಾ ಜಾಯಾರಾಯನಸುದೊರೆದ ನಂ- ।
ತರಮವಗೆ ಸಂತಾನಮಿಲ್ಲದಿರೆ ಕಲಹಗೈ- ।
ದರು ನಾನುತಾನೊಡೆಯಳೆಂದು ಗಂಗಾದೇವಿ ಮೇಣುವಮಾದೇವಿಯೆಂಬ ॥
ಅರಸಿಯರು; ತಂತಮ್ಮ ಬಂಧುಬಳಗಂಗಳೊಳ- ।
ಗಿರುವ ಬಾಲಕನೋರ್ವನಾವನಾದೊಡಮವನ ।
ಶಿರಸಂಗಿಯೊಡೆಯನಾಗಿಸಿ ತಾವೆ ಸುಖಪಡೆಯಲೆಂದವರು ಹವಣಿಸಿದರು ॥ ೧೬ ॥

ಅಂತರಂಗದ ಚಿಂತೆ ಮನುಜನಳಿವಿಗೆ ಮೂಲ- ।
ವಂತಸ್ಥ ಕಲಹವೇ ಮನೆಯ ನಾಶಕೆ ಮೂಲ- ।
ವಂತಸ್ಥಮಾತ್ಸರ್ಯ ಸ್ವಜನಘಾತಕವೃತ್ತಿಗಳೆ ರಾಜ್ಯವಳಿಯೆ ಮೂಲ ॥

ಇಂತಿರಲು ಶಿರಸಂಗಿಯೊರಾಜಮನೆತನದೊ- ।
ಳಂತಃಕಲಹಶಿಖಿಯು ಪ್ರಜ್ವಲಿಸಿ ಪ್ರಜೆಗಳಲಿ ।
ಸಂತೋಷವಳಿದು ನೆಮ್ಮದಿಗುಂದಿ ತಾಳಮೇಳಗಳಿಲ್ಲದಂತಾಗಲು ॥ ೧೭ ॥

ಶಿಸಸಂಗಿಯೊಡೆತನದ ಮೇಣರಸು ಮನೆತನದ ।
ಪರಮಾಭಿಮಾನಿಗಳು, ಲಿಂಗೈಕ್ಯ ರಾಯನಾ- ।
ಪ್ತರು ಚತುರರಾದ ಲಿಂಗಪ್ಪ ಬಸವಾರ್ಯರಲ್ಲದೆ ಮಂತ್ರಿದೇವರಾಯ ॥
ಶಿರಸಂಗಿಯೊಡೆಯಂಗೆ ಹಿತಗೈದ ನೀತಿಜ್ಞ ।
ರಿರಲಿವರು ರಾಣಿಯರೊಳಗೆ ಬೆಳೆದ-ಕದನವ ।
ನ್ನರಿದದನು ನೊಂದಿಸಲುಬೆಹುದೆಂದಾಲೋಚನಂಗೈದು ಕೊನೆಗೆ ॥ ೧೮ ॥

ಅರಸಿಯರು ತಂತಮ್ಮ ಬಂಧುವರ್ಗವ ಬಿಟ್ಟು ।
ಅರಸಿ ತತ್ಸತ್ಕುಲಸಮುದ್ಭವನ ಸುಂದರನ ।
ಪರಮ ಲಕ್ಷಣಯುತನ ದೈವಬಲವುಳ್ಳವನ ದೈವದಿಂದಲೇ ಪರಿಕಿಸಿ ॥
ಪೆರನೋರ್ವನಂ ಮಗನ ಪಡೆದುಕೊಳ್ಳುವದೆಂದು ।
ಸರಳಮಾರ್ಗವ ತೋರಿ ಪೇಳಲನುಮೋದಿಸಿದ- ।
ರರಸಿಯರು ಸಂತಸದೊಳೋರ್ವಳನಿವಾರ್ಯದಿಂದರೆ ಮನದೊಳಿನ್ನೋರ್ವಳು ॥ ೧೯ ॥

ಸದಮಲವಿಶಾಲಮತಿಯುಳ್ಳಸತ್‌ಶೀಲೆಯಾ- ।
ದುದರಿಂದ ಗಂಗಾಂಬೆ ತಾನೆ ಪಿರಿಯರಸಿಯಾ- ।
ದಧಿಕಾರ ಮಿರ್ದೊಡಂ ತನ್ನ ಬಳಗದಿ ದತ್ತು ಸ್ವೀಕರಿಸಿ ಸಕಲರೊಡನೆ ॥
ಒದಗಿ ಸುಖಭೋಗಕೆಡೆಯಿರ್ದೊಡಂ, ತೊರೆದದಂ ।
ಕದನವಾರಿಸುವ ಹಿತಚಿಂತಕರ ಸೂಕ್ತಿ ತನ ।
ಗದು ಶಿವನ ಪರಮ ಪ್ರಸಾದವೆನಲಮಿತಸಂತಸದಿ ಮುಳುಗಿದರೆಲ್ಲರು ॥ ೨೦ ॥

ತನಗೀ ವಿಚಾರ ಸರಿಬೀಳದಿರಲುಂ ತನಗೆ ।
ಜನಬಲವದಿನಿತಿಲ್ಲವೀಗ ಛಲದಿಂ ಕುಮತಿ ।
ಯೆನಿಪೆನಲ್ಲದೆಯಿಲ್ಲ ಫಲವೆಂದುಮಾದೇವಿ ಕಾಲಾನುಕೂಲದೊಳಗೆ ॥
ಮನದಿಚ್ಛೆಯಂ ಪಡೆಯಬಹುದೆಂದು ಚಿಂತಿಸುತ ।
ಮನಮಿರದೆ ಹಿತಚಿಂತಕರ ನಿಯಮಕೊಪ್ಪಿದಳು. ।
ಜನವರಿಯಲಿಂತು ರಾಣಿಯುವರೀರ್ವರುಂ ಸಮ್ಮತಿಸೆ ಕಾರ್ಯಕರ್ತರೊಡನೆ ॥ ೨೧ ॥

ಸಾರಿದರು ಬೀರಿದರು ಸುತ್ತಲುಂ ಶಿರಸಂಗಿ- ।
ಯೀ ರಾಜಕಮಲ ಸತ್ಕುಲಜಾತರಾದ ಸುಕು- ।
ಮಾರಕರನುದ್ವಾಹಿತರು ಚತುರಮತಿವಂತರ್ಬೈತಹುದು ಶಿರಸಂಗಿಗೆ ॥
ಆರು ರಾಜ್ಯಾರೋಹಣಕೆ ಯೋಗ್ಯರಹರೆಂದ- ।
ಪಾರಮಹಿಮೆಯ ದೈವ ಸೂಚಿಸುವದವರ- ।
ನೀ ರಾಜ್ಯಕಧಿಪತಿಯನೆಸಗಲಾಗುವದು ನಿಜಮೆಂಬಭಿಮತವ ನಾಡೊಳು ॥ ೨೨ ॥

ಸಿರಿಯಾರಿಗಾದೊಡಂ ಬೇಡಾಗುವುದೆ ? ತಾನೆ ।
ಹರಿದು ಬಹ ರಾಜ್ಯಲಕ್ಷ್ಮಿಯನೊಲ್ಲೆನೆಂಬರಿರು- ।
ವರೆ ? ನಾಡಿನೊಳು ಮೀರಿ ಪರ್ಬಿದಾ ಸುದ್ದಿಗೇಳ್ದನಿತೆನಿತೊ ಜನವು ತಮ್ಮ ॥
ತರಳರಂ ತರತರದಿ ಸಿಂಗರಿಸಿ ಭರದಿಂದ ।
ಕರೆದುಕೊಂಡೆಡೆಬಿಡದೆ ಬಂದಿಳಿದರಲ್ಲಲ್ಲಿ ।
ಶಿರಸಂಗಿಯೊಳು ನೋಳ್ಪ ಜನವು ಬೆರಗಾಗಲೆಲ್ಲರೊಳೋರ್ವನಿಹನಾರೆನೆ ? ॥ ೨೩ ॥

## ದೈವಪರೀಕ್ಷೆ

ಎಸೆವ ಲಕ್ಷ್ಮೇಶ್ವರದ ಸೀಮೆಯಲಿ ಚಿಕ್ಕೂರೆ- ।
ನಿಸುವ ಶಿಗ್ಗಲಿಯಲ್ಲಿ ಗೂಳಪ್ಪನೆಂಬವಂ ।
ಕೃಷಿಕನಾಗಿರ್ದನವನಂಗಜಾತರೊಳೋರ್ವನಾದ ರಾಮಪ್ಪನೆಂಬ ॥
ಲಸಿತ ಮುದ್ದಿನ ಮೊಗದ ಬಾಲಕನು ಬಾಲರಲಿ ।
ಕುಶಲಮತಿಯಾಗಿರ್ದನವನನ್ನು ಸೆಳೆದೊಯ್ದ- ।
ತಸಮಮಹಿಮೆಯ ದೈವ; ಶಿರಸಂಗಿಗೆಲ್ಲರೊಡನೇವೆ ಳ್ವಿನಚ್ಚರಿಯನು ॥ ೨೪ ॥

ತಂದೊದಗಿಸಿದರಾಗ ಸತ್ಕಾರಸಾಧನವ ।
ಬಂದ ಜನಸಮುದಾಯಕೆಲ್ಲಮಲ್ಲಲ್ಲಿ ತ- ।
ಕ್ಕಂದದಿಂದುಪಚಾರಮಾಗಲೆಲ್ಲರಿಗೆ ಹಿತಚಿಂತಕರು ನಿಯಮಿಸಿರ್ದ ॥
ಒಂದುದಿನದಿರುಳೆರಡನೆಯ ಯಾಮದೊಳು ಹೊರಟು ।
ನಂದನರನೀಕ್ಷಿಸಲ್ಕೆಲ್ಲರಂತಿಂತಿರಲು ।
ತಂದೆಯೊಡನಾರೋಗಣೆಯ ಗೈಯ್ವ ರಾಮಪ್ಪನಂ ಕಂಡು ತಕ್ಕುದೆಂದು ॥ ೨೫ ॥

ಅರಮನೆಗೆ ಬರಿಸಿ ಮರುದಿನವೆಲ್ಲ ತರಳರಂ ।
ಪರಿಕಿಸಲು ಶಾಸ್ತ್ರಜ್ಞರಿಂದವರನವರೊಳಾ ।
ಗುರುತರದ ರಾಜಲಕ್ಷಣಯುತಂ ರಾಮಪ್ಪನೆಂದೆ ನಿರ್ಣಯವಾಗಲು ॥

ಅರಿದು ಗಂಗಾದೇವಿ ತನ್ನ ವಿಮಲಾನ್ವಯಾಂ- ।
ಬರಸುಧಾಕರನಿವಂ ತನ್ನಣುಗನಿವನೆಂದು ।
ಪರಮಸಂತೋಷಾಂಬುಧಿ ಮೀರೆ ಮನವಾರೆ ಕಂಡಾನಂದಜಲಗರೆದಳು ॥ ೨೬ ॥

ಆದನುತ್ತೀರ್ಣನಿಂತೆಲ್ಲರಲಿ ದೈವದಿಂ- ।
ದಾ ದೈವಶೋಧದಲಿ; ಸಚಿವಾದಿ ಜನರು ಗಂ- ।
ಗಾದೇವಿಗವನೆ ಮಗನೆಂದೆಸಗಿ ಲಿಂಗರಸನೆಂದೆಸೆವ ಪೊಸವೆಸರನು ॥
ಮೋದದಿಂದಿಟ್ಟು ಕರೆದರು; ಬಳಿಕ ಮಾತೆ ಗಂ- ।
ಗಾದೇವಿ ರಾಗದಿಂ ಮುಂಡಾಡಿ ಕರೆದೊಯ್ದು ।
ಭೇದವಳಿದಿರೆ ತಾನೆ ಮೈದೊಳೆದಳೊಳ್ಪಣಿಸಿದಳು ನಲಿದು ಬಳಿಕ ॥ ೨೭ ॥

## ರಾಜ್ಯಾಧಿಕಾರ

ಜನಿಯಿಸಲು ನೈಜ ಪುತ್ರಪ್ರೇಮನಿವ ತನ್ನ ।
ತನಯಂ ಕುಲೋದ್ಧಾರಕಂ ಮನೋರಥರೂಪ- ।
ನನಘನಮರಂ ಸಕಲ ಸುಜನರುತ್ಸಾಹಸಂಜೀವನನೆಂದೊಲಿದು ನಲಿದು ॥
ಇನಿಯನಾಳಿದ ನಾಡಿಗೊಡೆಯನಿವನಹನೆಂದು ।
ಮನದೊಳುಬ್ಬುಬ್ಬಿಯವನಂಗಮಂ ವಸ್ತ್ರಭೂ- ।
ಷಣಗಳಿಂ ಸಿಂಗರಿಸಿ, ಕೂಡಿಸಿ ನಿಜಾಂಕದಲಿ, ಮುಂಡಾಡಿ ಮುದ್ದಿಸಿದಳು ॥ ೨೮ ॥

ಶೋಧಿಸಿ ಮುಹೂರ್ತಮಂ ಸಿಂಗರಿಸಿ ನಗರಮಂ ।
ಬೀದಿಯೊಳು ಮೆರಿಸಿ ಸಂಭ್ರಮದಿ ಪಟ್ಟವಕಟ್ಟಿ ।
ಸಾದರದೊಳಿತ್ತುಕಾಣ್ಕೆಯ ಪ್ರಜರು ಹೊಸ ಅರಸನಾಳ್ವಿಕೆಯ ಕೈಕೊಂಡರು ॥
ಹೋದ ಕಳೆ ತುಂಬಲರಮನೆ ಶೋಭಿಸಿತು; ನೋಡಿ ।
ಮೋದಿಸಿತು ಪರಿಜನಂ; ಬಡವನೇನಿಂತರಸ- ।
ನಾದನೇನಹಹ ! ತಿಳಿಯದು ವಿಧಿಯಲೀಲೆ ಯೆಂದುದು ಜನವು ಸೋಜಿಗದಲಿ ॥ ೨೯ ॥

ಪೊಳೆವ ಕೆನ್ನೆಗಳುಣ್ಮುವೆಳನಗೆಯ ಕಳೆಗೂಡೆ ।
ಜಳಜಾಗ್ರಕರ್ಣಿಕೆಯ ನಾಶಿಕವು ಸರಿಗೂಡೆ ।
ನಳಿನದೆಸಗೆಯ ಪಳಿದು ಕಳೆವ ವದನವ ನೋಡಿ ಜನರವರ ದೃಷ್ಟಿ ಕೂಡೆ ॥
ಉಳಿದುದಂ ಮರೆದಿವನ ಮನಮೆಚ್ಚಿ ಕೊಂಡಾಡೆ ।
ನಳಿನಾನನೆಯರೊನಕೆವಾಡಿನಲಿ ಸಲೆ ಪಾಡೆ ।
ಸೆಳೆದನರಮಗನೆಲ್ಲರನುರಾಗಮಂ ನಾಡೆ ತನ್ನ ಮೈಸಿರಿಯಿಂದಲಿ ॥ ೩೦ ॥

ಲಲಿತಮಾಗಿರೆ ಮೊದಲೆ ಪ್ರಜ್ವಲಿಪ ದೀಪಿಕೆಯು- ।
ನೊಳಗಿಡಲ್ಕಿನ್ನಿಷ್ಟು ಪರಿಶೋಭಿಸುವ ಸ್ಫಟಿಕ ।
ಕಲಶದಂತಾ ರಾಜಲಿಂಗಸುಕುಮಾರಕನ ಪೊಳೆವ ದೇಹದ ಕಾಂತಿಯು ॥
ಬೆಳೆಯಲಿಹ ಹೃದಯದೌದಾರ್ಯಾದಿ ಸದ್ಗುಣಂ- ।
ಗಳ ಪ್ರತಿಭೆಯಿಂದಮಲ ನೃಪತೇಜದಿಂದೆ ಕಂ- ।
ಗೊಳಿಸಿರ್ದುದಖಿಲರೊಲವಂ ಸಹಜದಿಂ ತನ್ನ ಬಳಿಗೆಳೆವ ಬಲದಿಂದಲಿ ॥ ೩೧ ॥

## ತಾಯಿ—ಮಗ

ಬಾಲರಾಜನ ರಾಜಮಾತೆ ಗಂಗಾಂಬೆ ಸಲೆ ।
ಪಾಲಿಸುವಳಾತನನಿವಾತುಗಳ ಕೇಳ್ದು ಮುದ- ।
ದಾಳುವಳು, ತನ್ನಂಗಭವನೆಂಬವೊಲು ಪುತ್ರಮೋಹಗೊಳ್ಳುವಳಾತನ ॥
ಲೀಲೆಯ ನಿರೀಕ್ಷಿಸಿ ವಿನೋದಿಸುವಳವನ ಪದೆ- ।
ದಾಲಿಂಗಿಸುವಳುಣಿಸುವಳು ಸೊಗದೊ— ।
ಳೋಲಾಡಿ ಬಗೆದುಂಬಿ ಕರೆವಳಪ್ಪಾಜಿಯೆಂದವನ ನಲ್ವೆಸರಿನಿಂದ ॥ ೩೨ ॥

ವಿನುತೆ ಗಂಗಾದೇವಿ ತಕ್ಕ ವಿದ್ಯೆಯ ಕಲಿಸು ।
ತನುನಯದಿ ಸುತನ ಪಾಲಿಸೆ, ಲಿಂಗಭೂವರನು ।
ನೆನೆಯದಿರ್ದಂ ಜನ್ಮವಿತ್ತ ಜನನಿಯನಣಂ ಪೊಸದಾಗಿ ಸಲೆ ತನ್ನನು ॥
ಬಿನದದಿಂ ಪೊರೆವ ಜನನಿಯ ಪುತ್ರವಾತ್ಸಲ್ಯ- ।
ದಿನಿರಸದಿ ಸಂತುಷ್ಟಿಯುಂ ಪಡೆದು ನಿರುತದಲಿ; ।
ಘನಮಲ್ತೆ ವಿಮಲ ತನುಜಾನುರಾಗದ ಮಹಿಮೆ ? ಬಣ್ಣಿಸಲದಂ ಸಾಧ್ಯವೇ? ॥ ೩೩ ॥

ಲಲಿತವಾಣಿಯೊಳುಂಟೆ ಮದವು ನಿಟ್ಟುರವು ? ನಿ- ।
ರ್ಮಲ ಮನದಿ ನಲಿದು ಗಂಗಾದೇವಿ ಸುತನ ಕರೆ- ।
ಯಲು 'ಮಗುವೆ, ಯೆಂಬಾ ಮಧುರ ಮಂಜುಳದ ಪ್ರೇಮರಸಪೂರ್ಣಮಾದ ನುಡಿಯು ॥
ವಿಲಸಿತಾಮೃತವಿತ್ತು ಕರ್ಣಕ್ಕೆ, ಹೃದಯಮುಂ ।
ಸಲೆ ಸೇರೆ ತದ್ರಸದಿ ಮಾತೃಭಕ್ತ್ಯಂಕುರವು ।
ಬೆಳೆಯಲುರೆ ತಾಯಿಯುಂ ಲೀಲೆಯಿಂದೋಲೈಸುತಿರ್ದನಾ ಲಿಂಗೇಶನು ॥ ೩೪ ॥

ಶಿರಸಂಗಿಯೊಳೆ ದೇಶಭಾಷೆಯ ಕಲಿತು ವರ ।
ಗುರುಗಳಿಂ ಮುಂದಧಿಕ ಶಿಕ್ಷಣವ ಪಡೆವುದಕೆ ।
ತೆರಳಿದನು ಕರವೀರಪುರಕೆ ಸಿದ್ಧತೆಯೊಳಲ್ಲಿರ್ದೊಡಂ ಲಿಂಗನೃಪನು ॥

ಸ್ಮರಿಸುತಿರ್ದಂ ಮನದಿ ತಾಯಿಯಂ ಸಂತತಂ ।
ಬರುವನಾಗಾಗ ಬಿಡುವಿನಲಿ; ಬಂದಾಗಲೊಂ- ।
ದರಗಳಿಗೆಯಾದೊಡಂ ತಾಯನಗಲಿರನು; ಮೇಣೆಂದಾದೊಡೊಂದು ದಿನವು; ॥ ೩೫ ॥

ಓದು ಮಗು ಕೇಳ್ವೆನೆನಲಾ ತಾಯಿ, ಲಿಂಗೇಶ ।
ನೋದುಗೀದುವದೇನು ಕುಳಿತು ನಿಮಗಾಯಾಸ- ।
ಮಾದಪುದು ತಾಯೇ, ನೀವೊರಗಿ, ನಿಮ್ಮಂಗರಕ್ಷಕನಿಹೆನು ತಾನೆನ್ನುತೆ ॥
ಯೋಧರಾಯಧ ಧರಿಸಿ ಬಳಿವರಿದು ನಗೆಯಿಂ, ವಿ- ।
ನೋದವಂ ವಿರಚಿಪಂ; ಕಾಣುತುರೆ ಮನದೊಳಾ- ।
ಮೋದದಿಂದೆಂತಿಹುದೊ ಪುಣ್ಯಬಲವಿಂಥ ಮಗನಂ ಕಂಡೆನೆನುತಿರ್ದಳು ॥ ೩೬ ॥

ನೆರೆಬೆಳೆಯಲಿಂತಿವರ ಪ್ರೇಮಬಂಧನವರಿದು ।
ಕೊರಗುವಳು ಸತತಂತರಂಗದಿಯುಮಾದೇವಿ- ।
ಯುರೆಬೆಂದಸೂಯೆಯಿಂದಾದೊಡಂ ತನಗೆ ಸಮಗಾಲವಿಲ್ಲೆಂದಾಕೆಯು ॥
ಹೊರಗೆ ಪ್ರೀತಿಸುತಾ ಕುಮಾರನಂ ಜನವರಿಯೆ ।
ಕರೆಸುತಿಹಳಾಗಾಗ ತಾನಿರ್ಪ ಬೇವೂರಿ ।
ನರಮನೆಗೆ ಮನವಿಲ್ಲಿದುಪಚಾರವಂ ಮಾಡುತಿಹಳಂತೆ ಲಿಂಗನೃಪನು ॥ ೩೭ ॥

ಚಿಕ್ಕಮ್ಮನಿಚ್ಛೆಯೊಲು ಬೇವೂರಿನರಮನೆಗೆ ।
ಕೆಕ್ಕಳಿಸುತೈತರುತಲಿಹನಲ್ಲಿ ಬಂಧನದಿ ।
ಸಿಕ್ಕಿಕೊಂಡವನಂತುದಾಸೀನನಾಗಿರ್ದು ಬೇಗದಿಂ ಪೋಗುತಿಹನು ॥
ಸಿಕ್ಕುವುದೆ ಪ್ರೇಮವೆಂದಾದೊಡಂ ಬರಿದೆ ? ಪ್ರೇ- ।
ಮಕ್ಕಹುದು ಪ್ರೇಮವೇ ವಿನಿಮಯವು ಕೊಂಡುತಂ- ।
ದಕ್ಕರತೆಯಿಂ ಕರಳು ಕರಗುವದೆ, ನೇಹವುಂಟಾಗುವದೆ ಭೂತಳದೊಳು ? ॥ ೩೮ ॥

## ಮಾತೃವಿಯೋಗ

ಕೆಲದಿನಂಗಳಲಿ ದಿನವಾಗಿ ಗಂಗಾದೇವಿ ।
ಬಲವಳಿದು ಪಾಸನವಲಂಬಿಸಿದಳಂತಂತು ।
ಬಳಿವಿಡಿದು ಬಲುವಿಧದ ಬೇನೆಗಳು ಬೆಂಬಳಿಸೆ ದೇಹಾವಸಾನವಾಗ ॥
ಬಳಿಸಾರಲುಂ ಶಾಂತಳಿಹಳಾಶೆಯೆನಿತೆನಿತು- ।
ಮುಳಿಯದಿರಲಾಕೆ 'ಹರಶಿವಶಿವಾ' ಯೆನುತವಳ ।
ಬಳಗವೆಲ್ಲವು ನೆರೆದು ಬೆಂದುದತಿ ಚಿಂತೆಯಿಂದಾ ಮಹಾ ಮಾತೆಗಾಗಿ ॥ ೩೯ ॥

ಕರೆಯಕಳುಹಿದರೊಡನೆ ತಾಯಗತಿಯನು ತಿಳುಹಿ, ।
ಕರವೀರಪುರದೊಳಿಹ ಲಿಂಗರಾಜನನಾತ- ।
ನರಿದು ಬರಲವಕಾಸವುಳಿಯಲಿಲ್ಲೊಂದುದಿನ ತನ್ನಂತ್ಯವನು ತಿಳಿಯುತ ॥
ವರಮಹಾಮಾತೆ ಸುಚರಿತ್ರೆ ಗಂಗಾದೇವಿ ।
ಯೊರೆಯೆ, ಸಂಬಂಧಿಕೆಯರವಳ ಮೈದೊಳೆದೊರಿಸಿ ।
ಬರಿಸಿ ಪೂಜಾಗೃಹದೊಳಾಸನದಿ ಕೂಡ್ರಿಸಿದರೆಚ್ಚರಿಕೆಯಿಂದಾಕೆಯು ॥ ೪೦ ॥

ಎಸೆವ ತನ್ನಿಷ್ಟಲಿಂಗವನು ಹಸ್ತದೊಳಿರಿಸಿ ।
ಭಸಿತ ಬಿಲ್ವದಲಂಗಳಿಂದೆ ಪೂಜಿಸಿ ಬಳಿಕ ।
ಮಸಗಿ ನಿಂದಾಪ್ತರಂ ನೋಡಿ ಕೈಮುಗಿದು, ಲಿಂಗವ ನೋಡಿಯೊಡಗೂಡುತ ॥
ನಸುಮೂರ್ಛೆಯಂತೊರಗಿ ಕಣ್ಮುಚ್ಚಿ, ಚಿರಶಾಂತಿ- ।
ಯೆಸೆದ ಭಾವಂ ತೋರೆ, ಬಳಗ ಬಿಕ್ಕಳಿಸಿ ದುಃ- ।
ಖಿಸುತೆಮ್ಮ ಕೈಬಿಟ್ಟು ಪೋದಿರಾ ಅವ್ವನವರೇ ಎಂದು ಕಳವಳಿಸುತ ॥ ೪೧ ॥

ಗಡಬಡಿಸಿ ತಾಯ ಬಳಲಿಕೆ ಕೇಳಿ ಲಿಂಗನೃಪ- ।
ನೊಡನೆ ಬಂದನು ತಾಯಮುಖ ಕಾಣಲೆಲ್ಲಿಹುದು ।
ಅಡಗಿದುಪು ವೊದಲಾತನದನರಿದು ನೆಲನೆದ್ದು ಬಡಿವಂತೆಯಾಕಾಶವು ॥
ಕಡಿಕಡಿದು ಕಳಚಿ ಮೇಲ್ಬೀಳ್ವಂತೆ ಪರಿದಂತೆ ।
ನಡುನೀರೊಳಾಶ್ರಯವು, ದಿಕ್ಕುಗಾಣದನಾಗಿ ।
ಪೊಡವಿಗೆಡೆಗೆಡೆದುರುಳ್ದನಮ್ಮ ನೀನೆಲ್ಲಿರುವೆಯೆಂದು ಬಾಯ್ಬಿಟ್ಟೊರಲುತ ॥ ೪೨ ॥

ಹಾ ತಾಯೆ ! ನೀನೆನ್ನನಾರಿಗೊಪ್ಪಿಸಿ ಪೋದೆ ? ।
ಹಾತೊರೆದು ಬರಲೆನ್ನ ಮೈದಡವಿದಪರಾರು ? ।
ಮಾತುಮಾತಿಗೆ 'ಮಗುವೆ, ಅಪ್ಪಾಜಿ' ಎಂದು ಪ್ರೀತಿಪರಾರು ? ನಲಿನರಾರು ? ॥
ಏತಕ್ಕಿಂತೊಲಿದೋಲಯಿಸಿದೆ ? ನೀನೇಕೆ ಪರಿ- ।
ಪೂತ ಸುಖಸಂಪನ್ನನಂ ಗೈದೆ ? ಈಗಲಿಂ- ।
ತೇತಕಮ್ಮಾ ಬಳಲಿಸುತ ಪೋದೆ ? ಗತಿಯೆನಗದಾರೆಂದು ಶೋಕಿಸಿದನು ॥ ೪೩ ॥

ಸಂತೈಸಲೆಳಸಿದರು ತರತರದಿ ನೆರೆದಜನ- ।
ಮೆಂತಾದೊಡಂಶಾಂತವಾಗದಂತಾದುದವ- ।
ನಂತರಂಗವ್ವು, ಕಾಣುತುಳಿದವರು ಗೋಳಿಡಲು ಪರ್ವೆ ಶೋಕಾವೇಗವು ॥

ಅಂತಃಪುರಂ ಕೆಲದಿನಂ ಕಪ್ಪು ಮೊಗದಾಳಿ- ।
ದಂತಾಯ್ತು; ಹೊತ್ತು ಹೆತ್ತಿಹ ಬಂಧಮಿನ್ನೇತ- ।
ಕೆಂತಿರಲು ತಾಯಿಮಕ್ಕಳ ಸಹಜ ನಿರ್ಮಲ ಪ್ರೇಮದನುಬಂಧವಿರಲು ॥ ೪೪ ॥

## ಮದುವೆ

ಆರು ಮಡಿದೊಡಮಾರು ಪೋದೊಡಂ ನಿಲ್ವುವೇಂ ।
ಧಾರುಣಿಯ ಕಾರ್ಯಂಗಳಿಲ್ಲಿಲ್ಲವಂಥವರಿ- ।
ಗಾರೆಷ್ಟು ದುಃಖಿಸರು? ಮತ್ತೆ ಮುಂದುಳಿದರುಪಜೀವನವು ನಡೆಯುತಿಹುದೇ ॥
ಓರಂತಿದಿರಲಿ ಹಿತಚಿಂತಕರು ನೆರೆದಾವ ।
ಧೋರಣೆಯ ಸಲುವಾಗಿಯೋ ಬೇಗದಿಂ ಲಿಂಗ- ।
ಧಾರುಣೇಶ್ವರನ ಮದುವೆಗೆಯು ಮಾದೇವಿಯನುಮತಿ ಪಡೆಯಲಣಿಯಾದರು ॥ ೪೫ ॥

ಬಲುಮೆಯಿಂದೊಡಬಡಲುಮಾದೇವಿ ಹಿತಕರ್ತ- ।
ರುಳಿಯದರಿಸಿದರತ್ತಲಿತ್ತಲುಂ ವಧುಗಳಂ ।
ಲಲಿತಸಲ್ಲಕ್ಷಣೆಯಾರಾರೆಂದು; ಚೆನ್ನಮ್ಮ ಲಿಂಗಮ್ಮ ಎಂಬವರನು ॥
ಬಲುಮಾನ್ಯ ಮನೆತನಂಗಳಲಿ ಶಿರಹಟ್ಟಿಯು- ।
ಕ್ಕಲಿಗಳಲಿ ಕಂಡು ಸಂಸ್ಥಾನದ ಪುರಾತನದ ।
ಬಳಕೆಯವೊಲೇಕಕಾಲದೊಳೀರ್ವರೊಡನೆ ಮದುವೆಯ ಮಾಡಲನುವಾದರು ॥ ೪೬ ॥

ಕರಿಸಿದರು ಸಕಲಾಪ್ತರಿಷ್ಟಜನರಂ; ಬಹಳ ।
ಬರಿಸಿದರು ವಾದ್ಯಗಳ ಗಾನ ನರ್ತನದವರ; ।
ತರಿಸಿದರು ವೈಭವದ ಸಂಗ್ರಹವ; ಲಿಂಗಮ್ಮ ಚೆನ್ನಮ್ಮರಿಗೆ ಕ್ರಮದಲಿ, ॥
ಇರಿಸಿದರು ಪಿರಿಯರಸಿ ಕಿರಿಯರಸಿ ಪೆಸರ; ಸಿಂ- ।
ಗರಿಸಿದರು ಬಳಿಕವರ ರನ್ನ ದೊಡವೆಗಳಿಂದ; ।
ಸುರಿಸಿದರು ಸಕಲರಾನಂದಬಾಷ್ಪವ ತಮ್ಮನಾಳುವರ ಸೊಬಗ ಕಂಡು ॥ ೪೭ ॥

ಗುರುಗಳೊಡಬಡುವಂತೆ, ತೃಪ್ತಿಯಂ ತಾಳ್ವಂತೆ ।
ನೆರೆದ ಜನಮಂಗಹೀನರನಾಥಜನರೊಸೆದು ।
ಹರಸುವಂತಾಪ್ತ ಜನರೆಲ್ಲರುಬ್ಬುಬ್ಬಿ ಮುದದಾಳ್ವಂತೆ ಲಿಂಗೇಶಗೆ ॥
ಉರುತರ ವಿವಾಹಮಂ ಪರಮೋತ್ಸವದಲಿ ಗೈ- ।
ದರು; ಸತಿಯರೀರ್ವರೊಡನೆಸೆದನಹ! ಕ್ಷಮೆದಯೆಗ ।
ಳುರೆವರೆದ ಧರ್ಮಸ್ವರೂಪದಂತವನಿಪಂ; ಮತ್ತೆ ಲಿಂಗೇಶನು ॥ ೪೮ ॥

ಇಂದುವನೆ ಪೆತ್ತು ಧರೆಗಿತ್ತುದೋ ಸಾಗರವು ? ।
ಸೌಂದರ್ಯರಾಶಿಯೋ ಜಗದ ಸುಕೃತದ ಫಲಮು- ।
ದೊಂದುಗೂಡೀ ರೂಪಮಾದುದೋ? ಸತ್ಕೀರ್ತಿಮೂರ್ತಿಯೋ ? ಪೇಳೆಂದೆನೆ ॥
ಸಂದಮಾಣಿಕಕಾಂತಿಯಂತಿರುವ ತನುಶೋಭೆ- ।
ಯಿಂದ ಬಗೆಗೊಳ್ವೆಳನಗೆಯ ನಗುವ ಮುಖದಂದ- ।
ದಿಂದ ಕಂಗೊಳಿಸಿರ್ದನಖಿಲ ಜನಮಧ್ಯದಲಿ; ಧನ್ಯನವನೇವೊಗಳ್ವೆನು ? ॥ ೪೯ ॥

## ಸ್ವಾರ್ಥಭೂತ

ಘನತೆಯಿಂ ಮದುವೆ ಮುಗಿಯಲು ಮುಂದೆ ಸಾಗಿದರು ।
ಜನರೆಲ್ಲ ತಂತಮ್ಮ ಗ್ರಾಮಂಗಳಿಗೆ ಪೌರ- ।
ಜನರಿತ್ತ ಮೋದದಿಂದಿರ್ದರೀ ಬಗೆಯೊಬ್ಬರಿಗೆ ಸೇರದಂತಾದುದು ॥
ಅನುರಾಗವಿರದೊಡವೆಯೆಂತಿರ್ದೊಡೇಂ ಗುಣಕೆ ।
ಮನದನುನಯವೆ ಮೂಲ ಮಂತುಮಾದೇವಿಗಾ ।
ಜನಮಾನ್ಯ ಲಿಂಗರಸ ಕೀಳೆನಿಸಿದಂ ಸ್ವಾರ್ಥದಿಂ ಪ್ರೇಮಮುಣ್ಮಲುಂಟೆ ? ॥ ೫೦ ॥

ಸ್ವಾರ್ಥವಾವರಿಸೆ ತೋರ್ವವೇ ದಯಾಮಮತೆಗಳು ? ।
ಸ್ವಾರ್ಥಸಾಧಕರರಿವರೇಃರೀತಿನೀತಿಗಳ ?
ಕೀರ್ತಿಗೆ ಕಲಂಕ ಬರುವುದನರಿವರೇ ? ಪಾಪಕಂ ಪಳಿಗಮಂಜಿದಪರೇ ? ॥
ಸ್ವಾರ್ಥಸಾಧನವೆಂಬ ಹಿರಿಯ ಭೂತವು ಕೊನೆಗೆ ।
ಸ್ವಾರ್ಥಸಾಧಕನಾತ್ಮವನೆ ಬಲಿಯ ಕೊಂಬುವದು
ಸ್ವಾರ್ಥಸಾಧನ ನಿಪುಣರಿದನಾದೊಡಂ ತಿಳಿವರೇನಿಲ್ಲವಿಲ್ಲವಕಟ ॥ ೫೧ ॥

ಅದರಂತುಮಾದೇವಿ ರಾಜ್ಯಮಂ ತನ್ನನುಜ- ।
ಗೊದವಿಸುವ ಬಲವಾದ ಸ್ವಾರ್ಥದಿಂ ಮತಿಗುಂದಿ, ।
ಬದಿಗಿರಿಸಿ ನ್ಯಾಯದಯೆಗಳ, ನೃಪನ ಕಾಡಲನುವಾದಳಾಕೆಯ ಮನದೊಳು ॥
ಉದಯಿಸಿದ ಕೀಳ್ಮೊಳಕೆಗುರೆ ನೀರನೆರದಂತೆ- ।
ಹೃದಯ ಕಲುಷಿತರನೇಕರುಮವಳಿಗುಪದೇಶಿ ।
ಸಿದರಂತೆ, ಬಳಿಕೇನು, ಲಿಂಗನವನನುಯಾಯಿಗಳ ಬಿಡದೆ ಮುರಿವೆನೆಂದು ॥ ೫೨ ॥

ಬಂದಳಾಗಲೆ ಪರಿಜನಂ ಸಹಿತ ಬೇವೂರಿ- ।
ನಿಂದ ಶಿರಸಂಗಿಯುರಮನೆಗೆ; ತಾಂ ಕೈಕೊಂಡು ।
ಸಂದ ಕೋಶಾಂತಃಪುರವನೆಲ್ಲವಂ, ಲಿಂಗನೃಪನ ಹಿತಚಿಂತಕರನು ॥

ಮುಂದೆ ಬರದಂತೆಸಗಿ, ಜ್ವರತಪ್ತ ರಾಯನಂ ।
ಬಂಧನದೊಳಿರಿಸಿದಳು; ಮತ್ತಾಂಗ್ಲರೊತ್ತಾಯ
ದಿಂದ ಬಿಡುಗಡೆಗೈದರುಂ ಪಲವೆಡರುಗಳಂ ತಂದಳಾ ಸುಕುಮಾರಗೆ ॥ ೫೩ ॥

ತೀರಲಿಲ್ಲಿಷ್ಟರಿಂ ದುರ್ದೈವದಾಟವತಿ ।
ಘೋರವಾದುದು; ರಾಜ್ಯದಧಿಕಾರದಾಶೆಯಿಂ ।
ಕ್ರೂರತನದಿಂದುಮಾದೇವಿ ಲಿಂಗರಸನಂ ರಾಜ್ಯಸಂಬಂಧದಿಂದೆ ॥
ದೂರಪಡಿಸಲು ಬಯಸಿ ದುರುಳರುಪದೇಶದಿಂ ।
ಸಾರಿದಳು ನ್ಯಾಯವನು ನ್ಯಾಯಪೀಠದಿ; ಧನವ ।
ತೂರತೊಡಗಿದಳವನ ಪರದೇಶಿಯಂತೆ ಪೊರಮಡಿಸಿದಳು ನಗರದಿಂದ ॥ ೫೪ ॥

## ಆಪತ್ತಿನಲಿ ನೋಡಿದಾಪ್ತರು

ಈಶಾವಕೃಪೆಯಾಗಲಿನ್ನೇನು ಪೊರಮಟ್ಟು ।
ಕಾಶಿಲ್ಲ ಬಳಿಯೊಳೊಂದುಟ್ಟ ವಸ್ತ್ರದ ಮೇಲೆ ।
ಘಾಸಿಯಾದನು ಲಿಂಗರಾಜನತಿಕಷ್ಟದಲಿ; ಕಡೆಗಾಪ್ತಹಿತವಂತರು ॥
ದೇಶಗತದಭಿಮಾನದಿಂದ ಮೇಣ್ ಲಿಂಗೇಶ ।
ನಾ ಸುಗುಣಗಣದೊಲವಿನಿಂದ ಪಡೆದಾತ್ಮ ಸಂ- ।
ತೋಷದಿಂದವಗೆ ಧನವಿತ್ತು ನ್ಯಾಯದಲಿ ಬಿಡದೆಯೊಡನಲೆದು ನೆರವಾದರು ॥ ೫೫ ॥

ಬಡವರಲಿ ಜನಿಸಿ ಬೆಳೆದುಂ ಪೂರ್ವಪುಣ್ಯದಿಂ ।
ಪಡೆದಧಿಕಸಿರಿಯುನದರೊಳುಯಿಂತು ಪಡೆಯುತಿರೆ ।
ಬಡತನದ ಕಷ್ಟದಿಂದಧಿಕ ಕಷ್ಟವನಿಳೆಯೊಳೇನು ಸೋಜಿಗವಲ್ಲವೇ ? ॥
ತಡೆಯನೊಡ್ಡುತ ಲಿಂಗನೃಪನಾಳ್ವಿಕೆಗೆ ಸವತಿ- ।
ಗೆಡೆಯಿಲ್ಲ ದತ್ತಕಕೆ ಪತಿಯು ಗತಿಸಿದ ಬಳಿಕ ।
ಮಡಿದ ಕೂಸಿನ ತಾಯಿ ತಾನೆಯಧಿಕಾರಿಯಾಗಿಹೆನೆಂದುಮಾದೇವಿಯು ॥ ೫೬ ॥

ದುರುಳರುತ್ತೇಜನಂಗೊಂಡು ವ್ಯಾಜ್ಯವ ಹೂಡಿ ।
ಸುರಿದು ಧನವಂ ಕೆಲರ ನೆರವಿನಿಂ ಕಲಹದಲಿ ।
ಬರಿಸಿಕೊಂಡಳು ಜಯವ ಬಳಿಕವಳ ಗರ್ವಕುಬ್ಬರಮಾಗಲರಿವನುಳಿದು ॥
ಕರಿಸಿದಳು ತವರೂರ ಹಿರಿಕಿರಿಯ ಬಳಗವುಂ ।
ಅರಸರುಡುತೊಡವುಗಳಿನವರ ಸಿಂಗರಿಸಿ ಮೇಣ್ ।
ಹೊರಿಸಿದಳು ಕೋಶವನೆ ಸಿದ್ಧರಾಮಯ್ಯಂಗೆ ತನ್ನ ಮುಂದಾಳೆನ್ನುತ ॥ ೫೭ ॥

ಕುಲಜರಿರ್ದುಂ ತಮ್ಮ ಕುಲಕಲಂಕಿತರಾಗಿ ।
ಬಲಿದಾಸೆಯಿಂ ನೀತಿಗೆಟ್ಟು, ಸಿರಿವಂತರಲಿ ।
ಕಲಹಗಳನರಸಿಯುದರಲಿ ಸೇರಿ ಬೆಳಸಿಯುಲ್ಬಣಗೊಳಿಸಿ ಮೋಸ ಗೊಳಿಸಿ ॥
ಸುಲಿದಪರಮಿತಧನವ ತಾನೆ ಬಲ್ಲಿದನೆಂದು ।
ಗಳಹುತಿಹ ಸಿದ್ಧರಾಮಯ್ಯನೊಲು ದುಷ್ಟರೀ ।
ಕಲಿಯುಗದಿ ಪಲಬರಿರ್ದಪರಿವರೆ ಮೂಲವಲ್ಲವೆ ಧರ್ಮದಳಿಗಾಲಕೆ? ॥ ೫೮ ॥

ಗತಿಗೆಟ್ಟನಿತ್ತ ಲಿಂಗೇಶನಾಪ್ತರ ಧನವು ।
ಗತಮಾಯ್ತು ಮೊದಲೆ ಜಯಮಿಲ್ಲಮಾದೊಡಮವನ ।
ಹಿತಕರ್ತರಿರದೆ ಮುಂಬಾಪುರಿಯ ನ್ಯಾಯಪೀಠಕೆ ದೂರಿದರು ನ್ಯಾಯವ ॥
ಮಿತಿಯುವರೆಗಾದರಿಸಿ ಕರೆದವರೊಳಿರ್ದುಣ್ಣು ।
ತತಿಕಷ್ಟದಿಂ ಕಾಲಕಳಿದನಾಗದವರಾ- ।
ಯತಮಾಗಿ ದೊರೆತರಸುತನದ ಸುಖ ಭೋಗಿಸುವನೆಂದು ನಗುವಂತಾಯಿತು ॥ ೫೯ ॥

## ಪರಿಹಾರ

ಕಡೆಗಾಲಮಿಹುದಲ್ತೆ ಕಡುಕಷ್ಟಕುಂ । ಬಾಳು ।
ಗಡಲೊಳೇರಿಳಿತಗಳುಮಿಹವಂತೆ ಗತಿಗುಂದಿ- ।
ದೊಡೆಯಗಿತ್ತರು ಹೊಂಗಲಿಂಗಳೇಶ್ವರದವರು ಬಹು ಧನವ ಪೇಶ್ವೆಯರಲಿ ॥
ಕಡುಸಾಹಸದಿ ಜಾಯರಾಯಗೀ ರಾಜ್ಯಮಂ ।
ಕೊಡಿಸಿದನ ದೌಹಿತ್ರ ಶಿವರಾಮಪಂತ ಕೇ- ।
ಳ್ದೊಡನಿದನು ಪೂರ್ವಾಭಿಮಾನದಿಂ ಜಯುವ ಪಡೆಯಲು ವಾಸೆಯಂ ತೊಟ್ಟನು ॥ ೬೦ ॥

ಘನವೈರಿ ಸಿದ್ಧಯ್ಯ ಗಾಡಿ ಬುಡಮೇಲಾಗಿ ।
ಪುಣೆಯ ಮಾರ್ಗದಿ ಮಡಿದನನುಕೂಲ ಕಾಲ ಬರ- ।
ಲನುಕೂಲಮಹುದೆಲ್ಲಮಿರಲಿ ಶಿವರಾಮಪಂತನು ನ್ಯಾಯ ಪೀಠದಲ್ಲಿ ॥
ಅನುವಾಗಿ ತಿಳಿಸಿ ಸಂಸ್ಥಾನದಿರವಂ ವಿಬುಧ ।
ಜನರ ಬೆಂಬಲ ಪಡೆದು ಸಾಸದಿಂ ರಾಜ್ಯದೊಡೆ- ।
ತನಕೆ ಲಿಂಗಾವನಿಪನೇ ಪೂರ್ಣಬಾಧ್ಯಸ್ಥನೆಂದು ನಿರ್ಣಯಗೊಂಡನು ॥ ೬೧ ॥

ಸಾರಿದನು ಶಿರಸಂಗಿಗಾಬಳಿಕ ಲಿಂಗೇಶ ।
ತೋರಿದನು ಸಿರಿಮೊಗವ ಜನರಿಗವರುಬ್ಬೆ, ಜೇ- ।
ವೂರಿಗೆಯುಮಾದೇವಿ ತೆರಳಲಾರಾಯ ಸಕಲಾಧಿಕಾರಗಳ ಪಡೆದು ॥

ಕಾರಕಾಲದ ಮೇಘಗಳನುಳಿದ ರವಿಯಂತೆ- ।
ಯಾ ರಾಹುವಗಿದುಂ ನುಸುಳ್ದ ಶಶಿಕಲೆಯಂತೆ ।
ಧೀರಸ್ವರೂಪದಂತೆಸೆದನವನಾಗ ಸಭೆಯಂ ಕರೆದು ಸಂಭ್ರಮದಲಿ ॥ ೬೨ ॥

ಸಂಧಿಸಿದನಿರದೆ ಬಲಗೊಟ್ಟಾಪ್ತ ಹಿತಜನಕೆ ।
ನಂದದಿಂ ಸಂದ ಭೂಧನಸುವಸ್ತುಗಳ ಫಲ- ।
ದಿಂದ ಕಲಹವಗೈದ ಚಿಕ್ಕಮ್ಮಗುಂಬಳಿಯನಿತ್ತು ಸಂತಸಗೈದನು॥
ಮುಂದೆ ಶಿವರಾಮಪಂತನೆ ತನಗೆ ಮಂತ್ರಿವರ- ।
ನೆಂದು ನಿಯಮನಗೈದು ಜನಕೊರೆದು ಸಲೆಜನಾ- ।
ನಂದಕರನಾಗಿ ಶಕೆ ಹದಿನೆಂಟನೂರು ಮೇಲ್ಮೂರು ಸಂದಿರೆಯಾಳ್ದನು, ॥ ೬೩ ॥

ತನಗಲ್ಲದವಳಾಗಿ ಕಂಗಾಲನಂ ಮಾಡಿ ।
ಘನತರದ ಕಷ್ಟಕೊಳಮಾಡಿ ಕಾಡಿರ್ದುಮಾ ।
ಜನನಿಗುಂಬಳಿಯನಿತ್ತುದು, ಲಿಂಗನೃಪನ ಶೀಲಕೆ ವಲಂ ಸಹಜಮಲ್ತೆ ?॥
ತನಗೆ ಕುಳದಿಂ ಕೆದರ್ದು ನೋವಿತ್ತುದಕೆ ಮುಳಿಯ- ।
ದೆನಿಸುಂ, ಜನಕೆ ಬೆಳೆದು ಬೆಳಸುಗಳನಿತ್ತ ಭೂ- ।
ಜನನಿಯ ಸುಪುತ್ರರುಂ ಕೇಡನಪಕಾರಿಗಳಿಗೆಸಗದಿಹುದೇಂ ಚಿತ್ರಮೋ ? ॥ ೬೪ ॥

ಅರಿವುದೀ ರಾಜ್ಯಮರ್ಯಾದೆಯನದೆಂತೆನಲು, ।
ಶಿರಸಂಗಿ, ಬೆಳ್ಳೇರಿ, ಹೊಸಬಾಳ, ಹೊಂಗಲಂ, ।
ಕುರನಕೊಪ್ಪಂ ಕೆಂಚಗಾರಕೊಪ್ಪಂ ಗೋವಿನಾಕೊಪ್ಪ ಕಲ್ಲಾಪುರಂ ॥
ಕಿರಿಯುಳ್ಳಿಗೇರಿ, ಹೂಲೀಕಟ್ಟಿಯೆನಿಪುವಿಂ- ।
ತಿರುವವೀರೈದೂರ ಸೀಮೆ, ಮೇಣ್ ಕೆಲವುಚಿತ ।
ವಿರುವದು ನೆಲಂ ನವಿಲುಗುಂದ ಸವದತ್ತಿಗಳ ಸೀಮೆಯಲಿ ಮುಖ್ಯಮಾಗಿ ॥ ೬೫ ॥

ಸಲೆಯೋಗ್ಯನಿವನೆಂದು ಸಾರ್ವಭೌಮಾಂಗ್ಲರುಂ ।
ಬಳಿಕರಿದು ಸವದತ್ತಿ ಸೀಮೆಯಲಿ ಸಂಸ್ಥಾನ- ।
ದಲಿ ನಡೆವ ಕೊಲೆ ಸುಲಿಗೆ ಬಡಿದಾಟಗಳ ವಿಚಾರಿಸಿ ದುಷ್ಟರಂ ದಂಡಿಪ ॥
ಬಲಿದು ಬಹ ಕೊಡುಕೊಳ್ವ ವ್ಯಾಜ್ಯಗಳ ಸಂಸ್ಥಾನ- ।
ದಲಿ ತೀರ್ಚಿ ನಿರ್ಣಯುವನೀಯುವಂಥಧಿಕಾರ- ।
ಗಳನಿತ್ತು ಮನ್ನಿಸುತ ಪದವಿಗಳನಿತ್ತರಾ ಸತ್ಯವಿಲಸನ್ಮೂರ್ತಿಗೆ ॥ ೬೬ ॥

## ಕೌಟುಂಬಿಕ ಅನುತಾಪ

ಬಳಿಗೊಳಿಸಿ ಲೋಕಾನುರಾಗವಮಂ, ರಾಗವಮಂ ।
ತಳೆದು ಧೃತಿಯಿಂ ಜನರನೋವುತುಂ, ಸೋವುತುಂ ।
ಬಲುದುರಿತವಂ, ನೀತಿಯುತನಾಗಿ, ರತನಾಗಿ ಗುರುಲಿಂಗಜಂಗಮದೊಳು ॥
ನೆಲೆಗೊಳುತ ಸುಖದೊಳಿರೆ ನಿಸ್ಸಾರ ಸಂಸಾರ- ।
ದೊಳಗೊಳಿತು ನಿಲಲುಂಟೆ? ರೋಗದಿಂ ಬೇಗದಿಂ ।
ಬಳಲಿ ಸತಿಯುಗ್ಮವುಂ ಭೂಪಂಗೆ ತಾಪಂಗೊಡುತ ಮೃತ್ಯುವಶಮಾದುದು ॥ ೬೭ ॥

ಮತ್ತಾಪ್ತ ಜನರು ಚಿಂತಿಸಿ ಮುಂದೆ ವಧುಗಳಂ ।
ಸುತ್ತಲುಂ ಶೋಧಿಸಿ ತಿಕೋಟೆಯಲಿ ಗ್ರಾಮಣಿಯ- ।
ರುತ್ತುಂಗವಂಶದಲಿ ಭಾಗೀರಥಿಯೆಂಬಳಂ ಕಂಡು ಲಿಂಗೇಶಗೆ ॥
ಉತ್ತಮಕ್ರಮದಿಂದ ಮದುವೆ ಮಾಡಿದರು ಭೂ- ।
ಭೃತ್ತನಾಕೆಯ ರೂಪನೊಡಬಡದೆ, ವರಿಸಿದನು ।
ಮತ್ತರಸಿ ಕಾಣುತುಕ್ಕಲಿಯ ಗಿರಿಜಾದೇವಿಯೆಂಬಳಂ ತತ್ಕಾಲದಿ ॥ ೬೮ ॥

ತಿಂಗಳಿಗೆ ಕಲೆಯಿರಲು ತಣ್ಗದಿರ ಬೀರನೇ- ।
ನಿಂಗೋಲು ವಕ್ರಮಿರೆ ಸವಿಗಿರ್ಪ ಕುಂದದೇ- ।
ನಂಗದಿಂ ಕಪ್ಪಿರಲು ಹಸುವದರ ಕ್ಷೀರಮಾಧುರ್ಯಕ್ಕೆ ಕೊರತೆಯೇನು ? ॥
ಪಿಂಗದ ಲಸದ್ಗುಣಂಗಳಿರೆ ರೂಪದೇ- ।
ನಂಗನೆಗೆ? ಭಾಗೀರಥಿದೇವಿ ತನ್ನ ಸುಗು- ।
ಣಂಗಳಿಂ ಪತಿಯನೊಲಿಸಿದಳಮಮ ಮನುಜರ್ಗೆ ಗುಣವೇ ಭೂಷಣವಲ್ಲವೆ? ॥ ೬೯ ॥

ಇರಲೀವಿಚಾರವಿಂತಿರುತಿರಲು, ಗರ್ಭಮಂ ।
ಧರಿಸಿದಳು ಮುಂದೆ ಗಿರಿಜಾದೇವಿ; ಸಕಲರುಂ ।
ಹರುಷಪಾಂತರು; ಪರಮ ಸಂಭ್ರಮವನೆಸಗಿದುದು ಬಂಧುಗಣಮಾಕಾಲದಿ ॥
ನೆರಿಸಿದರು ಸಕಲ ಸಾಹಿತ್ಯಗಳ ಪರಿಜನರ- ।
ನಿರಿಸಿದರು ಪಲಬರಂ ಸವದತ್ತಿಯೊಳಗಿಂತು ।
ಭರದಿನೆಸಗಿದರು ಗರ್ಭಿಣಿಯ ಸಂಗೋಪನದ ಸೌರಣೆಯನುತ್ಸಾಹದಿ ॥ ೭೦ ॥

ಹಿತಜನಂ ಪರಿಜನಂ ಕಣ್ಸಂತಸಂದಾಳೆ, ।
ಕ್ಷಿತಿಸತಿಯ ಪತಿಯ ಹೃತ್ಕುಮುದ ಕುಟ್ಮಲವರಳೆ,
ಮತಿವೆತ್ತ ರಾಜನಿಷ್ಠಪ್ರಜಾಹರ್ಷಪಾರಾವಾರ ಮೇರೆವರಿಯೆ ॥

ನುತಿವೆತ್ತ ಕೀರ್ತಿಚಂದ್ರಿಕೆ ಸುತ್ತಲುಂ ಪರ್ವೆ, ।
ಕ್ಷಿತಿನಾಥನಾಮಡದಿ ಪೂರ್ವಾಂಗನೆಯ ತೆರದಿ ।
ಸುತಬಾಲಚಂದ್ರನಂ ಪೆತ್ತಳಾ ಕಾಂತಾದಿಗಂಗನೆಯರಾವೋದಿಸೆ ॥ ೭೧ ॥

ಎಸಗಿದರಪರಿಮಿತೋತ್ಸವಗಳಂ ದೀನರಿಗೆ ।
ವಸುಮತೀಶಂ ವಸನ ಧನಕನಕ ದಾನಗಳ- ।
ನೊಸೆದಿತ್ತು ಸಂತೈಸಿ, ಸತ್ಕರಿಸಿ, ಸಂಭ್ರಮದಿ ಸಕಲಾಗಮಿತಜನರನು ॥
ವಿಷಮಕಾಲೊಡನೆ ತತ್ಸುಖಸಮಯದೊಳು ಬಂದಿ- ।
ತಸುವನೀಗಿದುದೊಂದು ತಿಂಗಳಪ್ಪುವ ಮೊದಲು ।
ಶಿಸುವಸಮವಿಧಿಯ ಮಹಿಮೆಯನೆಂತು ಬಣ್ಣಿಸಲಹುದು ಜಗದಿ ಮಾನವರ್ಗೆ ? ॥೭೨ ॥

ನಂದಿತಂತಃಪುರಜನಾನಂದದೀಪಿಕೆಯು ।
ಕಂದಿತಾಗಲೆ ನೃಪಾನ್ವಯವಲ್ಲರಿಯ ಕುಡಿಯು ।
ಬೆಂದುವೆಲ್ಲಾ ಜನರ ಹೃದಯಗಳು ದುಃಖಾಗ್ನಿಯಿಂದ ನೃಪನುತ್ಸಾಹವು ॥
ಕುಂದಿತು; ಮಹೇಶ್ವರಂ ಕೃಪೆಯೊಳೊಲಿದಿತ್ತ ಫಲ- ।
ವೊಂದು ಕಳೆದತ್ತೆಂದು ತಂತಮ್ಮ ಸ್ಥಳಗಳಿಗೆ ।
ಬಂದುದು ನಿರುತ್ಸಾಹದಿಂ ಜನಂ; ರಾಯನುಂ ಶಿರಸಂಗಿಗೈತಂದನು ॥ ॥ ೭೩ ॥

ತಿರುಗಿದುದು ಕಾಲಚಕ್ರಮದೊಡನೆ ಗರ್ಭಮಂ ।
ಧರಿಸಿದಳು ಭಾಗೀರಥಿದೇವಿ ಮುಂದಂಥ ।
ಪರಮಸಂಭ್ರಮಕೀಶನೊಪ್ಪದಿಹನೆಂದುಸಿಕನಿರೆ ಗಂಡು ಮಗುವುದಯಿಸಿ ॥
ಪರಕೈದಿತದುಮೊಡನೆ ಕೆಲದಿನಗಳಲ್ಲಿ ಬಿಡದೆ ।
ಪರಕೈದಳಾ ಮುಂದೆ ರಾಣಿ ಗಿರಿಜಾದೇವಿ ।
ಮರುಗಿದುದು ಕಂಡೆನಿತು ಭೂವರನ ಪೂರ್ವಸಂಚಿತಮೆಂದು ಜನಮೆಲ್ಲವು ॥ ೭೪ ॥

ಮರೆದನದನುಂ ರಾಯ ಗುಣಗಣದ ಕಣಿಯಾದ ।
ವರಸತಿಭಾಗೀರಥಿಯ ಪ್ರೇಮದೊಳು ಕಳೆದ— ।
ನುರೆ ಶಾಂತತೆಯ ಮನೆತನದ ಸೌಖ್ಯಮಂ ಪಡೆದು ಕೆಲದಿನಂ; ಹಿತಕರ್ತರು ॥
ವರಿಸುವದು ಸಂತಾನಕಿನ್ನೊಂದು ಕುಲವಧುವ- ।
ನಿರದೆ ನೀವೆಂದಾಗ್ರಹಕೆ ರಾಜನಾ ಪ್ರೇಮ- ।
ದರಸಿಯನುಮತಿ ಪಡೆಯಲಂಜುತಂಜುತ ಕೇಳೆ ಭಾಗೀರಥೀ ದೇವಿಯು ॥ ೭೫ ॥

ಸುಖವೆನಗೆ ಬೇರುಂಟೆ ನಿಮ್ಮ ಸುಖವಲ್ಲದೇ ? ।
ಸುಕುಮಾರನಪ್ಪುದೀ ವಂಶಕಾನೊಪ್ಪೆನೇ ? ।
ಸುಕೃತಿಯೋರ್ವಳು ತಮ್ಮ ಕರಪಿಡಿಯುಲಾಕೆಯೆನಗನ್ಯಳೇನನುಜೆಯಲ್ತೆ ? ॥
ವಿಕಲಮತಿಯಾಗೆನೆನೆ ನೃಪ ತಾನೆ ಧನ್ಯನೆಂ– ।
ದಖಿಲರನುಮತಿಯೊಳಂಕಲಗಿಯಾ ಗ್ರಾಮಣಿಯ ।
ಸುಕುಮಾರಿ ಸತ್ಪುತ್ರಿಯಾದ ಗಂಗಾಂಬಿಕೆಯ ವರಿಸಿದಂ ವೈಭವದೊಳು ॥ ೭೬ ॥

ಅನಿತರೊಳು ಗರ್ಭವಾಂತಳು ಮತ್ತೆ ಭಾಗಮ್ಮ ।
ಜನಪಾದಿಗಳ ಮನದಿ ಮುದಮುಣ್ಮೆ, ಬರಿಸಿ, ಗ– ।
ರ್ಭಿಣಿಯನಿರಿಸಿದರು ಸಂಗೋಪನಕೆ ವಿಜಯಪುರದಲ್ಲಿ ಫಲವನೀಕ್ಷಿಸುತಿರೆ ॥
ಘನತರದ ಬೇನೆಯೊದಗಿದುದಾಕೆಗುಪಚಾರ– ।
ವೆನಿತೆಸಗಿದೊಡವೊಡನೆಯೊಳ್ಬಿಜ್ಜರದರಿಂದ ।
ಗುಣವಾಗದಾ ಪತಿವ್ರತೆ ಪತಿಯ ಪಾದಗಳಿಗೆರಗಿ ನೀಗಿದಳಸುವನು ॥ ೭೭ ॥

ಸತತ ಪತಿದರ್ಶನದಿ ದರಹಸಿತಬಿಸಜಮುಖಿ ।
ಪತಿಪಾದಸೇವಾಮೃತಾಸ್ವಾದನಾತಿಸುಖಿ ।
ಪತಿಯ ಮನಕನುಕೂಲೆ ಸಕಲಸದ್ಗುಣಲೋಲೆ ಭಾಗೀರಥೀದೇವಿಯು ॥
ಸತಿಯರಿಗೆ ಮಿಗಿಲಾದ ಪತಿಯ ಪ್ರೇಮವ ಪಡೆದು ।
ಗತಿಸಲಾ ಸಾಧ್ವಿಯ ವಿಯೋಗದಿಂ ಲಿಂಗೇಶ– ।
ನತಿದುಃಖದಲಿ ಮುಳುಗಿಮುಳುಗೇಳ್ದು ಭ್ರಮೆಗೊಂಡನೆಂಬುದೊಂದಾಶ್ಚರ್ಯವೇ ॥೭೮॥

ಭಾವಿಸಿ ನಿಜಾಂಗನೆಯ ಪ್ರೇಮಮಂ ಪದಿನೇಳು ।
ಸಾವಿರಕೆ ಕೊಂಡನಮ್ಮನಗೇರಿಯಂ ವೀರ– ।
ಶೈವ ವಿದ್ಯಾಸಂಸ್ಥೆಗಿತ್ತನಾ ಹಳ್ಳಿಯನವಳ ಸ್ಮಾರಕವಿದೆನ್ನುತ ॥
ಆ ವಿಯೋಗವನಿಂತು ಸೈರಿಸಿರೆ ಗಂಗಾಂಬೆ– ।
ಯಾವ ಸುಖಲೇಶವನು ಕಾಣದಲೆ ಬೇಗದಿಂ ।
ಸಾವನಪ್ಪಿದಳಮಮ ನೃಪನ ಕಾಂತಾಭಾಗ್ಯಮಸ್ಥಿರಮಿದೆಷ್ಟೆಂದೆನೆ ॥ ೭೯ ॥

ಹೊರಗೆನಿತು ಮುದವಿರ್ದೊಡಂ ಲಿಂಗರಾಯಂಗೆ ।
ಪರಿಪೂರ್ಣಗೃಹಸೌಖ್ಯ ದೊರೆಯಲಿಲ್ಲೋರ್ವರೋ– ।
ರ್ವರ ಮೇಲೆ ಸತಿಯರೈವರು, ಜನಿಸಿದೆರಡು ಶಿಸುಗಳು ಗತಿಸಿ ಪೋದರಿಂತು ॥
ಕೊರಗುತಿರ್ದನು ರಾಯನೊಡನೊಡನೆ ಸತಿಸುತರ ।
ವಿರಹದಿಂ; ಹಿತಜನರ ಬಲುಮೆಯಿಂ ತಾನೊಪ್ಪಿ ।
ವರಿಸಿದಂ ಕಲ್ಲುಬೀಳಗಿಯ ಗೌಡರ ಪುತ್ರಿ ಸುಂದರಾಂಬೆಯ ಕೊನೆಯೊಳು ॥ ೮೦ ॥

## ರಾಜ್ಯ ಸುಧಾರಣೆ

ಅತಿದಾರುಣಸ್ಥಿತಿಯಿದಿಂತಿರಲು ಬಿಡದತ್ತ ।
ಚತುರತನದಿಂ ನಡಿಸಿ ರಾಜ್ಯಭಾರವ ಪ್ರಜರ ।
ಸುತರಂತೆ ಕಾಯ್ದು ನಯದಿನಿವಾತ ರೀತಿಯಿಂದರಟಾಳವೊದಲಾಗಿಹ ॥
ಮತಿಯುತರ ಮನ್ನೆಯರ ಒಲುಮೆಯಂ ಗಲಿಪೊಂದಿ ।
ನುತಿಸಿಕೊಳ್ಳುತ ಮೇಲ್ಮೆಯಿಂ ಸಕಲರಿಂದ ಜನ- ।
ಹಿತದ ಕಾರ್ಯಗಳಂ ಸುಧಾರಣೆಗಳಂ ರಾಜ್ಯದೊಳಗೆಸಗಿದನದೆಂತೆನೆ ॥ ೮೧ ॥

ಲಕ್ಕವಿಟ್ಟಖಿಲರುಪಜೀವನಕೆ ಮೂಲವಾ- ।
ದೊಕ್ಕಲತನವನುನ್ನತಸ್ಥಿತಿಗೆ ತಂದನೊಲಿ- ।
ದೊಕ್ಕಲಿಗರಿಗೆ ಧವಸಹಾಯಗಳನಿತ್ತು ಸಾಧನಕಲೆಯನರಿದು ತಿಳಿಸಿ ॥
ಅಕ್ಕರದೊಳೊರೂರ್ಗೆ ಘನತರದ ಸರಕಾರ- ।
ದೊಕ್ಕಲತನವನಿಟ್ಟು ರೈತರನುಕರಿಸುವಂ- ।
ತೊಕ್ಕಿದನು ವರ್ಷವರ್ಷದೊಳಗಣಿತದ ರಾಶಿಯಂ ಕೃಷಿಕಸಂಜೀವನು ॥ ೮೨ ॥

ಪರಿಪರಿಯ ಕಷ್ಟಗಳನುಂಡವರೆ ಮರುಗುವರು ।
ಕರಗುವರು ಪರರ ಕಷ್ಟವನರಿದು, ಮೇಣವರೆ ।
ಪರಮ ಕರುಣಿಗಳಹರು ಜನ್ಮಸುಖಿಗಿಂತೆಂಬ ಜನನುಡಿಯು ನಿಜವೆಂದೆನೆ ॥
ನೆರೆ ಮೊದಲು ಕಷ್ಟಬಟ್ಟಿಹ ಲಿಂಗ ಧರಣೀಶ ।
ಮರುಗಿ ಪರರಳಲಕೀವಂ ಸಹಾಯವ ಸತತ ।
ಕರುಣವನು ತೋರುವನು ದೀನರೊಳನಾಥರೊಳನಾಥ ರಕ್ಷಕ ನೊಲಿಯುತ ॥ ೮೩ ॥

ಬರಗಾಲದಲಿ ಬಡವರನ್ನವಿಲ್ಲದೆ ಬಳಲು- ।
ತಿರೆ ಕರುಣಿ ಮರುಗಿ ನೆರೆ ಸುರಿದಪರಿಮಿತ ಧನವ ।
ಶಿರಸಂಗಿ ಹೊಸಬಾಳಗಳಲಿ ಕಟ್ಟಿಸಿ ದೊಡ್ಡ ಕೆರೆಗಳಂ ಬಡಜನರನು ॥
ಪೊರೆದನಲ್ಲದೆ ಕೆಲಸವಾಗದಿಹ ಮುದುಕ -ಹುಡು ।
ಗರಿಗಾಗಿ ಧರ್ಮಾರ್ಥದನ್ನಛತ್ರವನಿಟ್ಟು ।
ಮರಣದಿಂದುಳಿಸಿ ಕಾಯ್ದನು ಹಲವು ದೀನರನು ದೀನೇಶ ಲಿಂಗೇಶನು ॥ ೮೪ ॥

## ಮಾಮರ ಮಿಂಚಿಸಿದ ತ್ಯಾಗ

ಕರುಣೆಯೆರಕಂಗೊಂಡ ಮೂರ್ತಿ ನೃಪನಿದಕೊಂದು ।
ಪಿರಿಯರ್ಥಮಿಹ ಕಿರಿಯ ಘಟನೆಯಂ,ಪೇಳ್ವೆನೀ- ।
ದೊರೆ ವಸಂತದೊಳೊಮ್ಮೆ ತೋಟದಲಿ ವಿರಮಿಸಿರೆ ಮಾಮರದ ತಣ್ಣೆಳಲಲಿ ॥

ತರಳನಾ ತೋಟಿಗನ ಕುವರನಿನಿವಣ್ಣಳಂ ।
ನೆರೆನೋಡಿ ಬೀಳಿಸಲ್ಕೆಸೆದ ಕೂರ್ಗಲ್ ಬಡಿದು ।
ದರಸಂಗೆ ರಕುತಬರೆ ತತ್‌ಕ್ಷಣಕೆ ಚಿಮ್ಮಿ ಬಹ ಸಿಡಿಗೋಪ ಬರಲಿಲ್ಲವು ॥ ೮೫ ॥

ತಂದೆ ತೋಟಿಗ ಮಗನ ಖತಿಗೊಂಡು ಬಡಿಯುತಿರೆ ।
ಮುಂದೆದ್ದು ಬಂದು ರಾಯಂ ಬಿಡಿಸಿ, ಚೀರ್ದಳುವ ।
ಕಂದನಂ ಕೈಹಿಡಿದು ನೈದಡವಿ ಮಂಡೆಯನ್ನಪ್ಪಿ ಸೈತಿಟ್ಟರಸನು ॥
ಮಂದಹಾಸದಿ ನಿರುಕಿಸಿರಲಿತ್ತ ಬಾಲಕನ ।
ತಂದೆ ಕಂಬನಿದುಂಬಿ ಗಡಗಡನೆ ನಡುಗುತ್ತೈ ।
ತಂದೊಡೆಯನಡಿಗಳಲಿ ಪೊರಳೆ, ಪಿಡಿದೆತ್ತಿ ಸಂತೈಸಿದಂ ಕರುಣಿನೃಪನು ॥ ೮೬ ।

ಇಂತು ಸುತಪಿತರ ಸಂತೈಸಿ, ತಾಳ್ದಂ ಭೂಪ ।
ಶಾಂತಿ ಸೈರಣೆ ಪ್ರೇಮಗಳನೆ, ತತ್ಸಮಯದಲಿ
ಸ್ವಾಂತರಂಗದಿ ಮೂಡಿ ಶಿವಭಾವ ಬೆಳಗಲುರೆಯರಿವಿರದ ಜೀವಿ ಮರವು ॥
ಇಂತು ಕಲ್ಲೇಟನಿತ್ತವಗೆ ಗಡಪಕ್ವರಸ ।
ವಾಂತ ಪಣ್ಣಿತ್ತುದೆನಲರಿವುಳ್ಳ ಮನುಜತಾ- ।
ನಿಂತೆಸಗದಿರೆ ಹೀನನೆಂದು ಯೋಚಿಸಿ ಮಗುವಿಗುಂಬಳಿಯನೊಲಿದಿತ್ತನು ॥ ೮೭ ॥

## ಅಭಿವೃದ್ಧಿ

ಬೆಳಗಾವಿಯಲಿ ಭವ್ಯ ಮಂದಿರವ ಕಟ್ಟಿಸಿದ- ।
ನೊಲಿದು ಸಂಚಾರಗಳ ಗೈದಾನಿಮಿತ್ತದಿಂ
ಹಲವು ಬಡಜನರ ಪಾಲಿಸಿದನೊಡನೊಡನೆಯಾಗತ ಮಹಾ ಜನತತಿಯನು ॥
ಸಲೆ ಮನ್ನಣೆಯನಿತ್ತು ಸತ್ಕರಿಸಿದಂ, ಲಲಿತ ।
ಕಲೆಗಳಲಿ ಕುಶಲರಾದರನರಿದು ಬಹುಮಾನ- ।
ಗಳನಿತ್ತನಖಿಲಾಂಗಸುಂದರ ಸುಧಾರಣೆಯುಗೈದನಾ ಸಂಸ್ಥಾನದಿ ॥ ೮೮ ॥

ಈಶದತ್ತಮಿತವಾದೈಶ್ವರ್ಯಮಿರಲು ಲಿಂ- ।
ಗೇಶನೊಲಿವಿಂ ದಾನಗಳನಿತ್ತು ಹಲವು ವ- ।
ರ್ಷಾಶನಗಳಂ ಧರ್ಮಸಂಸ್ಥೆಗಳಿಗಿತ್ತು ವಿದ್ಯಾನಿಧಿಗೆ ಧನವಿತ್ತನು ॥
ಕಾಶೀ ಮಹಾಕ್ಷೇತ್ರ ರಾಮೇಶ ಯಾತ್ರಾ ವಿ- ।
ಶೇಷಮಂ ಗೈದು ಕಾಣಿಕೆಗೆ ಭೂಧನಗಳಂ ।
ತೋಷದಿಂದಿತ್ತು ಬಹುಜನವ ಸಂತೈಸಿ ಧರ್ಮದಿ ಕೀರ್ತಿಯುತ ನಾದನು ॥ ೮೯ ॥

ಮುಂದಿನಾಡಳಿತೆಯೊಳು ಲಿಂಗರಾಜಗೆ, ಜನಕ ।
ತಂದೆಯಹ ಹಿರಿಯಗೂಳಪ್ಪನುಂ ಪರಮಾಪ್ತ ।
ಬಂಧುಜನವಿಂಗಳೇಶ್ವರ ರಾಯಗೌಡರುಕ್ಕಲಿಯ ಭೀಮನಗೌಡರು ॥
ಸಂದ ಸಂಸ್ಥಾನದೂರ್ ಹೊಂಗಲ ಬನಪ್ಪನವ- ।
ರೆಂದಿಗುಂ ಹಿತಕರ್ತರಾಗಿ ಪಿರಿಯಭಿಮಾನ- ।
ದಿಂದ ನೆರವಂ ನೀಡುತವನೊಡನೆ ಸಂತತಂ ಚರಿಸುತಿರ್ದರು ರಾಗದಿ ॥ ೯೦ ॥

ಜನವೊಲ್ದು ಪೊಗಳಲುಂ ರಾಜ್ಯದಾಡಳಿತ- ।
ವನು ಸಾಗಿಸಿದನನೂನತೆಯಿಂ ನೃಪತಿ ಸರ್ವ- ।
ಜನಹಿತದ ಘನತರದ ಕಾರ್ಯಂಗಳಂ ಧೈರ್ಯದಿಂದೆಸಗಿದನದಲ್ಲದೆ ॥
ಮನೆತನದ ಕಷ್ಟಕರಮಾದ ಸಂಘಟನ ವಿಘ- ।
ಟನೆಗಳೆಗುವಾಪ್ತೇಷ್ಟಹಿತಕುಮವನನವರತ ।
ದಣಿಯದೆದೆಗೊಟ್ಟನಾತನ ಬುದ್ಧಿಬಲಮಾನಸಿಕಬಲಗಳೆಂತಿರ್ಕುವೋ ? ॥ ೯೧ ॥

## ಮಹಾಸಭಾಧ್ಯಕ್ಷ

ವೀರಶೈವಾವನತಿ ಕಾಲದಲಿ ತನ್ಮತೋ- ।
ದ್ಧಾರದ ಮಹಾಸಭೆಯ ಸಂಸ್ಥಾಪನೆಗೆ ಧರ್ಮ- ।
ವೀರರು ಹೆಣಗಿ ಸಾಧಿಸಿದರದನು; ಮೊದಲೆರಡು ಸಭೆಯೊಳಧ್ಯಕ್ಷಪದವ ॥
ಧೀರನತಿ ಚತುರನದರಿಂ ಯೋಗ್ಯನೆಂದರಿದು ।
ವೀರಶೈವಪ್ರಮುಖರೀ ಲಿಂಗನೃಪಗಿತ್ತು ।
ಭೂರಿಸನ್ಮಾನಿಸಿದರಾತನಂ ಜನಮಾನ್ಯನಾಗುವದು ಸಾಮಾನ್ಯವೇ ? ॥ ೯೨ ॥

ಮೊದಲನೆಯ ಧಾರವಾಡದ ಸಭೆಯೊಳಧ್ಯಕ್ಷ ।
ಪದವಿಯಲಿ ಮೆರೆದು ನೆರೆನೆರೆದ ಪಂಡಿತರ ಮ- ।
ಧ್ಯದಲಿ ಕಳಕಳಿಯ ಧಾರ್ಮಿಕ ಭಾಷಣದಿ ' ತನ್ನ ಸಾವಿಂದೆ ಸ್ವಮತ ಹಿತವು ॥
ಒದವುತಿರ್ದೊಡೆ ಮುದದಿ ಸಾಯ್ವೆ ' ನೆನೆ ಕೇಳಿ ಕೋ- ।
ವಿದರು ನೃಪನಗಣಿತೌದಾರ್ಯಮಂ ಹೊಗಳಿದರು ।
ಪದೆದು ಮುಂದೆರಡನೆಯ ಸಭೆಯೊಳುಮಪಾರ ಜನಮನ್ನಣೆಯ ಪಡೆದೆಸೆದನು ॥ ೯೩ ॥

## ಅನಾರೋಗ್ಯ

ಹೀಗೆ ಜನನುತನಾಗಿ ಬಾಳಿರಲಜೀರ್ಣದಿಂ ।
ರೋಗ ಸೇರಿತು ವಾಸಿಯಾಗದಿರಲದುವೆ ಕ್ಷಯ- ।
ವಾಗಿ ಪರಿಣಮಿಸಲ್ಕೆ ಬೆಳಗಾವಿಗೈತಂದು ಶೋಧಿಸಿ ಸುವೈದ್ಯರಿಂದ ॥

ಬೇಗನಧಿಕೋಪಚಾರವಗೈದೊಡದಕೆ ಗುಣ- ।
ವಾಗದೆ ಬೆಳೆದು ಲಿಂಗರಾಜನತ್ಯಧಿಕ ಕೃಶ- ।
ನಾಗಲತಿ ಭಯುಗೊಂಡು ದುಃಖಿಸಿದರಾಪ್ತಬಂಧುಗಳು ಮರುಗಿದರಖಿಲರು ॥ ೯೪ ॥

ಕಲಿತನದಿ ರಣದಿ ಹಗೆಗಳ ಸೀಳ್ದ ವೀರರುಂ ।
ಸಲೆ ವೈಭವಂಗಳಿಂ ಮೆರೆದ ಭೂಪಾಲರುಂ ।
ಲಲಿತ ತತ್ವಗಳ ಬೀರ್ದಾ ತತ್ವವೇತ್ತರುಂ ಘನತರದ ವಿದ್ವಾಂಸರುಂ ॥
ಕುಲಮಾನ್ಯರುಂ ಕಾಲವಶರಾದರೆನಲಾತ- ।
ನಳುವಿಗಳವಿಲ್ಲದಿರೆ ಸತ್ಕೀರ್ತಿಸಂಪದಗ- ।
ಳೊಳು ನಲಿವ ಲಿಂಗಭೂವರನಿಗಾ ಕಾಲನಿದಿರಾದನಿನ್ನೇಗೈವುದು ॥ ೯೫ ॥

ಬಳಿಕತಾನುಳಿಯೆನೆಂದಾರಾಯ ಬಗೆದು ನಿ- ।
ರ್ಮಲ ಮನೋಬಲದಿಂದ ಮೃತ್ಯುಪತ್ರನ ಬರೆದು ।
ಬೆಳಗಾವಿಯಧಿಕಾರಿಗೊಪ್ಪಿಸಿ ಸುಯೋಜನೆಯ ತನ್ನ ಮುಂದಿನ ರಾಜ್ಯದಿ ॥
ಸಲೆಗೈದು ಶಿರಸಂಗಿಗೈದಿ ಪೆರ್ಚಿದ ಬೇನೆ-
ಯಲಿ ನವಿಲುಗುಂದಕೈತಂದಲ್ಲಿಯುಂ ರೋಗ ।
ಬಲಿದು, ಬರೆವತ್ಸರ ಪರಾಭವದ, ಭಾದ್ರಪದ ಶುಕ್ಲ ಪಕ್ಷದ ಚೌತಿಯು ॥ ೯೬ ॥

## ಶಿವೈಕ್ಯ

ವಾಯುದಿಂದಿಷ್ಟರನು ಕರಿಸಿ ದರ್ಶನವನಿ- ।
ತ್ತಾಯತಾಕ್ಷಿಗಳಿಂದ ಜನರನೀಕ್ಷಿಸಿ ಲಿಂಗ- ।
ರಾಯ ಕೈಮುಗಿದು ಶಿವನಂ ನುತಿಸಿ ಕಣ್ಮುಚ್ಚಿ ಚಿರಶಾಂತಿಯಂ ತಾಳ್ದನು ॥
ಭೋಯೆಂದರಖಿಲರಾಶ್ರಿತರು ಮರುಗಿದರು ಹಾ- ।
ಹಾಯೆಂದು, ಘನವಂತ ದೀನನಾಥನೆ ಪೋದೆ- ।
ಯಾಯೆಂದು ಸಕಲ ಜನರತಿ ದುಃಖದಿಂದ ಬಸವಳಿದು ಬಸುರಂ ಹೊಸೆದರು ॥ ೯೭ ॥

ಪರಕೈದೆಯಾ ರಾಜರಾಜೀವ ವನಹಂಸ ? ।
ಮರೆಯಾದೆಯಾ ಸುಜನವನವಸಂತನೆ? ನಮ್ಮ- ।
ಜರೆದುಳಿದೆಯಾ ಸಕಲ ಜನಮನೋರಥರೂಪ ದುರುಳರೀ ಜನರೆನ್ನುತ ॥
ನೆರೆತೊರೆದೆಯಾ ಭೋಗಿ ಭೋಗನಿರ್ಲಿಪ್ತ ನೀ– ।
ನಿರದೆಂದೆಯಾ ಭವದಿ ಶಾಂತಿಸುಖ ಮೀಗಲಿಂ- ।
ತುರೆಸಾರ್ದೆಯಾ ದೊರೆಯೆ ಕೈಲಾಸಕಡರ್ದೆಯಾ? ಯೆಂದು ಹಲುಬಿದರೆಲ್ಲರು ॥೯೮॥

## ಲಕ್ಷ್ಮಣವಧಿ ಮುಕ್ಕಳು

ಮುಂದೆಯೂ ವೃತ್ತ್ಯಪತ್ರವನೋಡಿಯಾಶ್ಚರ್ಯ- ।
ವಿಂದದೇಂ ಥಾನಶೂರನೊ ಲಿಂಗರಾಯನಾ- ।
ನಂದದಿಂ ರಾಜ್ಯವನೆ ಸ್ವಮತಹಿತಕಾಗಿ ಬಡಮುಕ್ಕಳಿಗೆ ದಾನವಿತ್ತಂ ॥
ಸಂದ ಕಲಿಯುಗದಲ್ಲಿ ಕರ್ಣನಿವನಲ್ತೆ ಗಡ- ।
ಮೆಂದು ನೆರೆದವರುಚ್ಚಕಂಠದಿಂ ಪೊಗಳಿ ಮೇ- ।
ಣಿಂದೀ ತೆರೆದ ತ್ಯಾಗಿ ಧರೆಯೊಳಿನ್ನಾರು ಭಾಪೆನುತ ಮತ್ತಿಂತೆಂದರು ॥ ೯೯ ॥

ಸಂತಾನರಹಿತನೀ ರಾಯನೆಂದೆಂಬರ- ।
ತ್ಯಂತ ಮತಿಮಂದರಲ್ಲವೇ ? ಬಗೆಯ ನೀ ಕೋಮ- ।
ಲಾಂತರಂಗದ ಬಲದಿ ಜಡದೇಹದಂಗನೆಯನಲ್ಲದೆ ದಯಾನಂಗನೆಯನು ॥
ಸಂತಸದಿ ವರಸಿಯವಳಿಂದೆ ಪಡೆದಿರುವೆ ಲ- ।
ಕ್ಷಾಂತರ ಸುವೀರಶೈವಾತ್ಮಜರ ಲಿಂಗಭೂ- ।
ಕಾಂತಾಮನೋಹರನೆ ನಿನ್ನ ಬಳಗದ ಗಣನೆಯುಂಟೆ ಭೂಮಂಡಲದಲಿ ॥ ೧೦೦ ॥

ಕಡುಬಡವನಾದೊಡಂ ಪಡೆದ ತಂದೆಯು ನಿನ್ನ ।
ಕಡುತರದ ವಿಧಿಯ ಲೀಲಾಮಹಿಮೆಯಿಂದೆ ಮೇಣ್ ।
ಬಡಜನಕೆ ವಿಹಿತನಾದೊಡೆಯನಿವನಹನೆಂಬ ದೈವ ಸಂಕಲ್ಪದಿಂದ ॥
ಪಡೆದೆಯಲ್ಲವೆ ನೀನು ರಾಜ್ಯಲಕ್ಷ್ಮಿಯ ? ಮತ್ತೆ ।
ಪಡೆದೆಯಲ್ಲವೆ ಸಂಪದಾಧಿಕ್ಯವನು ಬಿಡದೆ ।
ಬಡವರಿಂ ಹರಕೆಯಿಂ ಪಡೆದು ಪಡೆದೈ ದಯಾನಿಧಿ ವಿಮಲ ಸತ್ಕೀರ್ತಿಯ ॥ ೧೦೧ ॥

ನಲಿದಾಡೆ ಲೀಲೆಯಿಂ ನಾಲಿಗೆಯೊಳಾವಾಣಿ ।
ನಲಿದಾಡೆ ಶ್ರೀದೇವಿ ನಿನ್ನ ಕರಕಂಜದೊಳು ।
ನಲಿದಾಡೆ ಸದುಹೃದಯ ನಿಲಯದಿ ದಯಾದೇವಿ ಮತಿಯುತನು ಶ್ರೀಮಂತನು ॥
ಸಲೆದಯಾವಂತನೆಂದೆನಿಸಿ ನೀ ಮೆರೆದು ಜನ- ।
ರೊಲವ ಮನ್ನಣೆ ಪಡೆದು ಮರೆಯಾದೊಡೀಗಲುಂ ।
ನಲಿದಾಡುತಿರ್ಪೆ ಸುಜನರ ರಸನೆಯೊಳು; ನೀನದೇಂ ಪರಮ ತೇಜಸ್ವಿಯೋ ? ॥ ೧೦೨ ॥

ಎಲೆ ಮಹಾತ್ಮನೆ ಲಿಂಗಭೂವರನೆ ನಿನ್ನ ।
ಲಲಿತ ಸುಚರಿತ್ರವನು ಕೇಳ್ದು ವಿಮಲಾನಂದ ।
ಜಲನಿಧಿಯೊಳೋಲಾಡದವನಾವನಿರುವನೈ ಸುಗುಣಿ ಜನ ಸಮುದಯದೊಳು ॥

ವಿಲಸಿತ ಸುಗುಣನಿಧಿಯೆ ನಿನ್ನ ದೈವದ ಘಟನೆ ।
ಗಳು, ಧೈರ್ಯದುದ್ಯಮ ವಿಚಿತ್ರ ದಾನಗಳು ಬಗೆ- ।
ಯೊಳು ಸೇರಿ ಸುಳಿಯೆ, ಸಜ್ಜನರ ಹೃಜ್ಜಲರುಹಂಗಳು ವಿಕಾಸಿಸದಿಪ್ಪುವೇ ? ॥ ೧೦೩ ॥

ತವಸದುಪಕಾರವಂ ತೀರಿಸುವದೆಂತು ಸಾ- ।
ಧ್ಯವು ವೀರಶೈವರಾದೊಡೆ ನಿನ್ನ ವಾಂಛಿತವು ।
ತವೆ ತೀರುವಂತೆ ವಿದ್ಯೆಯ ಕಲಿತು ಸ್ವಜನರ ಸ್ವದೇಶೋನ್ನತಿಯ ಕಾರ್ಯವ ॥
ಜವದಿ ಕೈಕೊಂಡು ನಿನ್ನಮಲ ಕೀರ್ತಿಯನು ಕಾ- ।
ಯುವದೇ ಕೃತಜ್ಞತೆಯನರ್ಪಿಸುವ ಮುಖ್ಯಮಾ- ।
ರ್ಗವು ನಿಜಂ ಸಂದೇಹವೇನಿದಕೆ? ಧನ್ಯ ಲಿಂಗಾವನಿಪ ಧನ್ಯಧನ್ಯ ॥ ೧೦೪ ॥

ಇಂತು ನುತಿಗೈದುದು ಜನಂ ರಾಯನಂ; ಧರ್ಮ ।
ವಂತರಂ ಪೊಗಳದಿಹರುಂಟೆ ಸಜ್ಜನರೊಳಿಂ- ।
ದಿಂತೀಗ ಜಗದಿ ಪರ್ಬಿದ ಲಿಂಗಭೂವರನ ನಿರ್ಮಲಯಶೋದೇಹಕೆ ॥
ಅಂತ್ಯವಿರದಸ್ತಿತ್ವವನಿತ್ತು ಮೇಣಾತ ।
ನಂತರಾತ್ಮವ ತನ್ನೊಳಕೊಂಡು ಶಿವನೀಗೆ ।
ಶಾಂತಿಯನ್ನೆಂದವನ ಪಾದಕರ್ಪಿಸುವೆಸೀ ಕವಿತಾಸುಮಾಂಜಲಿಯನು ॥ ೧೦೫ ॥

ಇದು ದೈವಬಲ ಧೈರ್ಯ ಸದ್ಭಕ್ತಿ ಸದ್ಭಾವ ।
ಹೃದಯವೈಶಾಲ್ಯ ಚತುರತೆ ತ್ಯಾಗ ವಿನಯಾದಿ ।
ಸದುಗುಣಂಗಳ ಸೊಗಸನೀವ ಸುಚರಿತೆ 'ಲಿಂಗರಾಜ ವಿಜಯಂ' ಕಾವ್ಯಕೆ ॥
ಪದಿನೆಂಟು ನೂರ್ರೈವತ್ತೆರಡನೆಯ ಶಕೆ ಚೈತ್ರ ।
ವಿಧುವಾರ ಶುಭಯುಗಾದಿಯಲಿ ಕನ್ನಡದ ಕವಿ ।
ಬುಧರೊಳಿಗಂ ಲಕ್ಕಪಂ ಮುಗಿಸಿ ಮೃಡನಡಿಗೆ ನೀಡೆ ಮಂಗಲ ಮಾದುದು ॥ ೧೦೬ ॥

---

# ಆಗಬಾರದು ಬಾಳು—ಕೀಳು*

ಗಿಡ ಬಳ್ಳಿಗಿಂತ ಕೀಳೇನ ನಮ್ಮ ಬಾಳು ?।
ಮಾವು–ಬೇವಿನಕಿಂತ ಕಡಿಯೇನ ಬಾಳು ?।
ಕೇಳಿಕೊಳ್ಳತಾರ್‍ವ ಲಿಂಗರಾಜರು ತಮಗ್ವತಾವು ।
ಗಿಡಬಳ್ಳಿಗಿಂತ ಕೀಳೇನ ನಮ್ಮ ಬಾಳು ?॥

ತಿಳಿಗೇಡಿ ಹುಡುಗ ಎಸೆದಾಗ ಕಲ್ಲೊಂದು ।
ತಡಮಾಡದೆ ಕೊಟ್ಟಿತು ಎರಡ ಹಣ್ಣು ಗಿಡವೊಂದು ।
ಬೀಸಿದ ಕಲ್ಲು ತಾಗಿದರೆ ಉರುಳಿ ತಾ ಬಂದು ।
ಬಡಿದರೆ ಸಿಟ್ಟೇಕೆ ಇಷ್ಟು ನನ್ನ ಮನಕಿಂದು ?॥

ಕೇಳಿಕೊಳ್ಳತಾರ ಲಿಂಗರಾಜರು ತಮಗ್ವತಾವು ।
ಗಿಡ–ಬಳ್ಳಿಗಿಂತ ಕೀಳೇನ ನಮ್ಮ ಬಾಳು॥

ತಾಕಿತು ಕಲ್ಲು ದೇಸಾಯರ್‍ಗೆಯೆಂದು ।
ತೋಟದ ಆಳು ಬಂದು ಮನನೊಂದು ।
ತುಂಟ ಮಗನೆಂದು ಬಡಿತಾನ ಹಿಡತಂದು ।
ಉಪ್ಪುಂಡ ಮನಿಗೆ ಬಗಿದಲ್ಲೊ ಎರಡೆಂದು ॥

ಆಳು-ಮಗನ ಪರಪಾಟ ಕಂಡು ।
ದೇಸಾಯರು ಹೇಳತಾರ ಖಂಡತುಂಡು ।
ಇನ್ಮೇಲೆ ಬಡಿದರೆ ಮಗನ್ನ ಕೇಳೇನಿಕಂಡು ।
ನಾಳೆ ಬಾ ವಾಡೇಕ ಹುಡುಗನ್ನ ಕರಕೊಂಡು ॥

ವಾಡೇದ ಸಭಾದಾಗ ಕೇಳತಾರ ಲಿಂಗರಾಜರು ।
ಗಿಡ ಬಳ್ಳಿಗಿಂತ ಕೀಳೇನ ನಮ್ಮ ಬಾಳು ?।
ಮಾವು ಬೇವಿನಕಿಂತ ಕಡಿಯೇನ ಬಾಳು ?।
ಕೂಡಿದ ಮಂದಿಗೆ ಕೇಳತಾರ ಲಿಂಗರಾಜರು ।

---

* ಬೇಸಿಗೆಯ ದಿನ. ಮಾವಿನತೋಟದಲ್ಲಿ ದೇಸಾಯರು ಕುಳಿತಾಗ, ಮಾವಿನಕಾಯಿಯ ಆಶೆಯಿಂದ ಹುಡುಗನು ಕಲ್ಲು ಬೀಸಿದನು. ಎರಡು ಕಾಯಿ ಉದುರಿದವು. ಕಲ್ಲು ಉರುಳುತ್ತ ದೇಸಾಯರಿಗೆ ಬಡಿಯಿತು. ಆಗ ಲಿಂಗರಾಜರು ತಮ್ಮ ಮನದಲ್ಲಿ ವಿಚಾರಿಸಿರಬಹುದಾದ ಒಂದು ಘಟನೆ.

ಹಸುಗೂಸು ಹಸಗೊಂಡು ಹಂಬಲಿಸಿ ಅತ್ತಾಗ।
ಹಾತೊರೆದು ತಾಯಿ ಮೊಲೆಹಾಲನಿತ್ತಂಗ।
ಅರೆಮರುಳ ಎಸೆದ ಕಲ್ಲೊಂದಕ್ಕಾಗ।
ಮಾಮರವು ಕೊಟ್ಟಿತು ಎರಡ ಹಣ್ಣಾಗ॥

ತಾಕಿದರೆ ಉರುಳಿ ಆ ಕಲ್ಲು ನನಗಂದು।
ನಾನೇನು ಕೊಡಬೇಕು ಈ ಹುಡುಗನಿಗಿಂದು।
ಕೂಡಿದ ಮಂದ್ಯಾಗ ಕೇಳತಾರ ಲಿಂಗರಾಜರು।
ಗಿಡ ಬಳ್ಳಿಗಿಂತ ಕೀಳೇನ ನಮ್ಮಬಾಳು ?॥

ಊರ ಮುಂದಿನ ವಾಡೇದ ತೋಟ।
ಮಾವು–ನಿಂಬೆ–ಕಂಚಿ– ಬಾಳೆಯತೋಟ।
ಎರಡು ಎಕರೆಗೆ ಮಿಕ್ಕಿದರೂ ಅಷ್ಟ॥
ಉಂಬಳಿ ಕೊಡಬೇಕ ಹುಡುಗಗ ಹಕ್ಕ ಬಿಟ್ಟ॥

ಆಗಬಾರದು ಬಾಳು–ಗಿಡಬಳ್ಳಿಗಿಂತ ಕೀಳು।
ಮಾವು–ಬೇವಿನಕಿಂತ–ಕಡಿಯೇನ ನಮ್ಮಬಾಳು॥

---

# ಸಿರಸಂಗಿ ಲಿಂಗರಾಜರು

ಹರಿಶ್ಚಂದ್ರ ಶಿಬಿಚಕ್ರವರ್ತಿ ಕರ್ಣ ಮಹಾದಾನಿಗಳಾಗಿ ಹೋದ್ರಾ ಅಮರಾ ।
ಎಲ್ಲಾ ದಾನಿಗಳ ಮರಿಸಿದ ತ್ಯಾಗವೀರ ಅರಸ ಸಿರಸಂಗಿ ಲಿಂಗರಾಜರಾ । ಪಲ್ಲವಿ ॥

೧

ಸಿರಸಂಗಿ ರಾಜ್ಯ ಸ್ಥಾಪನೆ ಮಾಡಿದ ವಿಠ್ಠಪ್ಪಗೌಡನೆಂಬುವ ಹುಲಿ ।
ಸಿರಸಂಗಿ ಹೆಸರ ಅಳಿಯದಾಂಗ ಮಾಡಿದ ಅರಸ ಲಿಂಗರಾಜ ಭೂಮಿಯಲಿ ॥
ಪುಣ್ಯ ಕ್ಷೇತ್ರ ಸಿರಸಂಗಿ ತಾಣದಿ ಕಾಳಮ್ಮದೇವಿ ನೆಲಸಿದಳಲ್ಲಿ ।
ರಾಜ್ಯಲಕ್ಷ್ಮಿ ಕಾಳಮ್ಮನ ವರದಿಂದ ಮೆರಿತದ ದಶದಿಕ್ಕಿನಲಿ ॥
ಧೀರ ಶೂರ ಗಂಭೀರ ಗುಣದಿಂದ ರಾಜ್ಯವಾಳಿದಾರ ಪ್ರೀತಿಯಲಿ ।
ಅರಸ ವಿಠ್ಠಪ್ಪಗೌಡ ಜಾಯಪ್ಪನವರೆಗೆ ರಾಜ್ಯ ಬೆಳೆತ ವಂಶವೃದ್ಧಿಯಲಿ ॥

ಚ್ಯಾಲ

ಅರಸ ಜಾಯಪ್ಪ ದೇಸಾಯರ । ಹಾಸಿಗೆ ಹಿಡಿದಾರ । ಜಡ್ಡ ಜೋರಾಗಿ ।
ಶಿವ ಅಂದ ಹೋದ್ರ ಅಸು ನೀಗಿ ।
ರಾಜ್ಯಕ ಬಿತ್ತ ಅಂಧಕಾರ । ದುಃಖ ಸಾಗರ । ಶೋಕದ ಬೇಗಿ ।
ಸಿರಸಂಗಿಯ ಸೂರ್ಯ ಹೋದಾನೋ ಮುಳುಗಿ ॥

ಏರು

ಗಂಡನ ಅಗಲಿದ ಗಂಗೂತಾಯಿ ತಾ । ಕುಂತಾಳ ಆಗಿ ಬೇಖಬರಾ ।
ಹರಿಶ್ಚಂದ್ರ ಶಿಬಿಚಕ್ರವರ್ತಿ ಕರ್ಣ ಮಹಾದಾನಿಗಳಾಗಿ ಹೋದ್ರ ಅಮರಾ ।
ಎಲ್ಲಾ ದಾನಿಗಳ ಮರಸಿದ ತ್ಯಾಗವೀರ ಅರಸ ಸಿರಸಂಗಿ ಲಿಂಗರಾಜರಾ ॥

೨

ವಾಡಿಕೆಯಂತೆ ರಾಜ್ಯಕ ಒಡೆಯನ ಹುಡುಕತಿದ್ಲ ಗಂಗಮ್ಮ ತಾನಾ ।
ಸಡಗರದೊಡೆಯನ ಶೋಧಿಸಿ ಬೇಸತ್ತಾ ಸಾರಿದಾಳ ಡಂಗೂರವನಾ ॥
ಕನ್ನಡ ರಾಜ್ಯದ ಚನ್ನಾದ ಮಕ್ಕಳ ತನ್ನಿರೆಂದ ಹೇಳ್ಯಾಳ ಪುನಃ ।
ತಮ್ಮ ಮಕ್ಕಳ ಮಹಾರಾಜರಾಗಲೆಂದ ಕೂಡಿದಾರ ರಾಜ್ಯದ ಜನಾ ॥
ಸಮಸ್ತ ಶಿಶುಗಳ ಪರೀಕ್ಷಿಸಿದಾಗ ಮನಸೆಳೆದ ಗುಣ ಸಂಪನ್ನಾ ।
ಸಿಂಹದ–ಮರಿ ಇದು ಸಿಂಹಾಸನಕಧಿಕಾರಿ ಯೋಗ್ಯ ಅಂತ
ಹೇಳಿದ ಪ್ರಜಾ ಜನಾ ॥
ವನಶಿಗ್ಲಿ ರೈತ ಘೂಳಪ್ಪನ ಮಗ ಅವನ ಹೆಸರ ಇತ್ತ ರಾಮಣ್ಣಾ ।
ಹೆಸರ ಬದಲ ಮಾಡಿ ಲಿಂಗರಾಜರಂತಾ ಪುನಃ ಮಾಡಿದಾರ ನಾಮಕರಣಾ ॥

**ಚ್ಯಾಲ**

ಹದಿನೆಂಟ ನೂರಾ ಎಪ್ಪತ್ತೆರಡನೇ ಸಾಲ। ಜೂನ ತಿಂಗಳ।
ಶುಭದಿನದಂದಾ। ದತ್ತಕ ಮಾಡಿದಾರ ಆನಂದಾ।
ಅಪ್ಪಾಸಾಹೇಬ ಅಂತ ತಾಯಿ ಪ್ರೀತಿಲಿ। ತುಂಬ ಬಾಯಲಿ।
ಕರೆಯೂಳ ಬಹು ಚಂದಾ। ಎಲ್ಲಾರ ಪ್ರೀತಿಯ ಕಂದಾ॥

**ಏರು**

ಕನ್ನಡ ನಾಡಿನ ಕಡುಗಲಿ ಲಿಂಗರಾಜ ಬೆಳೆದು ಬಂದ ಭೂಪ ಗಂಭೀರಾ।
ಹರಿಶ್ಚಂದ್ರ ಶಿಖಿಚಕ್ರವರ್ತಿ ಕರ್ಣ ಮಹಾದಾನಿಗಳಾಗಿ ಹೋದ್ರ ಅಮರಾ।
ಎಲ್ಲಾ ದಾನಿಗಳ ಮರಿಸಿದ ತ್ಯಾಗವೀರ ಅರಸ ಸಿರಸಂಗಿ ಲಿಂಗರಾಜರು॥

೩

ಸರಳಸ್ವಭಾವದ ತರುಳ ಲಿಂಗರಾಜ ಕೊಲ್ಹಾಪೂರದಲ್ಲಿ ಪಡೆದ ಶಿಕ್ಷಣಾ।
ಮನೆತನದಲ್ಲಿ ಒಳಜಗಳ ಹತ್ತಿ ಅಂದೇ ಶಿಕ್ಷಣಕ ಹೊಡೆದಾರ ಶರಣಾ॥
ಜಾಯಪ್ಪದೇಸಾಯ್ರು ಕಿರಿಯ ಹೆಂಡತಿ ಉಮಾದೇವಿ ನಡಿಸ್ಯಾಳ ಕದನಾ।
ಸಾಧ್ವಿಶಿರೋಮಣಿ ಗಂಗಾದೇವಿಯವರು ನೋಡಲಾರದೆ ಮುಚ್ಯಾಳ ಕಣ್ಣಾ॥
ತಾಯಿ ತೀರಿದ ಮ್ಯಾಲ ಚಿಕ್ಕಮ್ಮ ಉಮಾದೇವಿ
ವಹಿಸಿಕೊಂಡ್ಲ ಅಧಿಕಾರವನ್ನಾ।
ಲಿಂಗರಾಜರನ್ನ ಕಿತ್ತಒಗೆದ ಸುಳ್ಳ ಮಾಡಬೇಕಂದ್ಲ ದತ್ತಕವನ್ನಾ॥
ಚಂಡಿಯಾಂಗ ಶನಿಯಾಗಿ ಬೆನ್ನಹತ್ತಿ ಕಾಡಿದಾಳ ಲಿಂಗರಾಜರನ್ನಾ।
ಮುಂಬೈ ಹಾಯಕೋರ್ಟಿಗೆ ನ್ಯಾಯ ಹೂಡಿದಾಳ
ಸುಳ್ಳಮಾಡಬೇಕಂದ್ರ ಸಿಂಹಾಸನಾ॥

**ಚಾಲ**

ಲಿಂಗರಾಜರಂತೆ ತೀರ್ಪಾತ। ಅಧಿಕಾರ ಕೈಗೆ ಬಂತ।
ಹರುಷದಿ ಮನಾ ತುಂಬಿ ತುಳಿಕಿಶ್ಯಾರ ನಾಡ ಜನಾ।
ಪ್ರಜರಿಷ್ಟ ಕೈಗೂಡಿತ। ದೇವರ ಚಿತ್ತ। ಆತ ಪ್ರಬಲಾ।
ಲಿಂಗರಾಜರ ಹೆಸರ ನಾಡಮ್ಯಾಲಾ॥

**ಏರು**

ಧರ್ಮದ ಮೂರುತಿ ಬಡವರ ತಾಯಿ ತಂದಿ ಅನಿಸಿಕೊಂಡ್ರ
ದೊರಿ ಲಿಂಗರಾಜರಾ।
ಹರಿಶ್ಚಂದ್ರ ಶಿಬಿಚಕ್ರವರ್ತಿ ಕರ್ಣ ಮಹಾದಾನಿಗಳಾಗಿ ಹೋದ ಅಮರಾ।
ಎಲ್ಲಾ ದಾನಿಗಳ ಮರಿಸಿದ ತ್ಯಾಗವೀರ ಅರಸ ಸಿರಸಂಗಿ ಲಿಂಗರಾಜರಾ॥

೪

ಪರಶುರಾಮನ ಪ್ರತಿ ಅವತಾರ ಲಿಂಗರಾಜ ಪವಿತ್ರ ಮನದಿ ರಾಜ್ಯವಾಳಿದಾ ।
ಬೇಡಿದವರಿಗಿ ಇಲ್ಲ ಎಂದೂ ಅನ್ನಲಿಲ್ಲ ತುಂಬು ಮನಸಿನಿಂದ ಕೊಡುತಿದ್ದಾ ॥
ಗೋದಾನ ಭೂದಾನ ಬಡವರ ಕಲ್ಯಾಣ ಅನ್ನಛತ್ರ ಊರೂರಿಗೊಂದಾ ।
ಕಾಶಿ–ರಾಮೇಶ್ವರ ಪುಣ್ಯಕ್ಷೇತ್ರದಲ್ಲಿ ಧರ್ಮಛತ್ರಗಳ ಕಟ್ಟಿಸಿದಾ ॥
ಇದ್ದ ಎರಡು ಮಕ್ಕಳು ಸತ್ತ ಹೋದರೂ ಚಿಂತಿಸಲಿಲ್ಲ ಎಳ್ಳಷ್ಟು ಸುದ್ದಾ ।
ನಾಡಿನ ಮಕ್ಕಳೇ ತನ್ನ ಮಕ್ಕಳಂತ ಲಿಂಗರಾಜ ಮನಸಿಗೆ ತಿಳಿದಿದ್ದಾ ॥
ದಾನಪತ್ರವನ್ನು ಮುಂಚಿತವಾಗಿ ಬರೆದ ಕೋರ್ಟಿನಲ್ಲಿ ಅದನಿಟ್ಟಿದ್ದಾ ।
ಹತ್ತೊಂಬತ್ತನೂರು ಆರನೆ ಅಗಸ್ಟದಲ್ಲಿ ಆನಂದದಿಂದ ಕಣ್ಣ ಮುಚ್ಚಿದ್ದಾ ॥

ಚ್ಯಾಲ

ಶಿಕ್ಷಣ ಸಂಸ್ಥೆಗೆ ಮೀಸಲಾಗಿ । ಸಂಸ್ಥಾನ ಖುದ್ದಾಗಿ ।
ಕೊಟ್ಟ ಹೋದ್ರ ನಿತ್ಯ ತಂದೆಯಾಗಿ । ನಾಡು ಮರೆಯಲಾರದೆಂದಿಗಿ ।
ಕೆ. ಎಲ್. ಇ. ಸಂಸ್ಥಾ ಸ್ಥಾಪನೆಯಾಗಿ । ನಾಡ ತುಂಬ ಬೆಳಗಿ ।
ಲಿಂಗರಾಜರಿಂದಾಗಿ । ಕಾಲೇಜ ಆದವು ಊರ ಊರಿಗಿ ॥

ಏರು

ಖ್ಯಾತ ಬನಹಟ್ಟಿ ಕವಿ ಗಂಗಾತನಯ ಅಪ್ಪಣ್ಣ ಹೇಳಿದ ಈ ಸಾರಾ ।
ಹರಿಶ್ಚಂದ್ರ ಶಿಬಿ ಚಕ್ರವರ್ತಿ ಕರ್ಣ ಮಹಾದಾನಿಗಳಾಗಿ ಹೋದ್ರ ಅಮರಾ ।
ಎಲ್ಲಾ ದಾನಿಗಳ ಮರಿಸಿದ ತ್ಯಾಗವೀರ ಅರಸ ಸಿರಸಂಗಿ ಲಿಂಗರಾಜರಾ ॥

# ಸಖೀ ಗೀತ

೧

ತ್ಯಾಗವೀರ ಸಿರಸಂಗಿ ಲಿಂಗರಾಜರ ನಾಮಸ್ಮರಣೆಯ ಮಾಡೂನೂ ಬಾ।
ಅವರಂತೆ ನಡೆಯುದು ಕಲಿಯುದು ಕಲಿಯೋಣು ಬಾ।
ಜಗದೊಳು ಮಾನವರಾಗೂನು ಬಾ।
ತ್ಯಾಗವೀರ ಸಿರಸಂಗಿ ಲಿಂಗರಾಜರ ನಾಮಸ್ಮರಣೆಯ ಮಾಡೂನು ಬಾ॥

೨

॥ಅಂತಾ॥ ರಾಜ್ಯಭೋಗದ ತ್ಯಾಗ ಮಾಡಿದ। ಭಾರ್ಗವನಂತೆ ಮಹಾದಾನಿ ಎನಿಸಿದ।
ಜಗದೊಳು ಅಳಿಯದೆ ಧರ್ಮವೀರ ಯೋಗಿಯ ನೆನಿಯೂನು ಬಾ।
ಜಗದೊಳು ಮಾನವರಾಗೂನು ಬಾ।
ತ್ಯಾಗವೀರ ಸಿರಸಂಗಿ ಲಿಂಗರಾಜರ ನಾಮಸ್ಮರಣೆಯ ಮಾಡೂನು ಬಾ॥

೩

॥ಅಂತಾ॥ ಒಬ್ಬ ಮಗನ ತಂದಿಯಾಗದೆ ಜಗದೊಳು ನಾಡಿನ ಮಕ್ಕಳಿಗೆಲ್ಲ ತಂದಿಯಾಗಿ।
ಲೋಕ ಕಲ್ಯಾಣ ಉಪಕಾರಿಯಾದ ಲಿಂಗರಾಜರ ನೆನಿಯೂನು ಬಾ।
ಜಗದೊಳು ಮಾನವರಾಗೂನು ಬಾ॥
ತ್ಯಾಗವೀರ ಸಿರಸಂಗಿ ಲಿಂಗರಾಜರ ನಾಮಸ್ಮರಣೆ ಮಾಡೂನು ಬಾ॥

೪

॥ಅಂತಾ॥ ಕನ್ನಡನಾಡಿನ ಪುಣ್ಯ ಪುರುಷನ। ಉನ್ನತ ಧ್ಯೇಯ ಸಾಧಿಸಿದವನ।
ಕನ್ನಡ ತಾಯಿಯ ಪುಣ್ಯ ಪುತ್ರನಿಗೆ ವಂದನೆ ಮಾಡೂನು ಬಾ।
ಜಗದೊಳು ಮಾನವರಾಗೂನು ಬಾ।
ತ್ಯಾಗವೀರ ಸಿರಸಂಗಿ ಲಿಂಗರಾಜರ ನಾಮಸ್ಮರಣೆಯ ಮಾಡೂನು ಬಾ॥

೫

॥ಅಂತಾ॥ ಪರಶುರಾಮನ ಪ್ರತಿ ಅವತಾರದವನ। ಪ್ರತಿ ನಿತ್ಯ ಮಾಡಿರಿ ಆತನ ಸ್ತವನ।
ಆಚಂದ್ರಾರ್ಕ ಉಳಿದ ಬೆಳಗಿದ ಮಹಾಲಿಂಗರಾಜರ ನೆನಿಯೂನು ಬಾ।
ಜಗದೊಳು ಮಾನವರಾಗೂನು ಬಾ।
ತ್ಯಾಗವೀರ ಸಿರಸಂಗಿ ಲಿಂಗರಾಜರ ನಾಮಸ್ಮರಣೆಯ ಮಾಡೂನು ಬಾ॥

೬

॥ ಅಂತಾ ॥ ಖ್ಯಾತ ಬನಹಟ್ಟಿ ಕವಿ ಗಂಗಾತನಯಾ। ಅಪ್ಪಣ್ಣ ತೋರಿದ
ಆತನ ಹೃದಯಾ।
ನಾಡಿನ ನಂದಾದೀಪವೆನಿಸಿದ ದಿವ್ಯ ಜ್ಯೋತಿಯ ನೆನಿಯೂನು ಬಾ।
ಜಗದೊಳು ಮಾನವರಾಗೂನು ಬಾ।
ತ್ಯಾಗವೀರ ಸಿರಸಂಗಿ ಲಿಂಗರಾಜರ ನಾಮಸ್ಮರಣೆಯ ಮಾಡೂನು ಬಾ॥*

---

* ಈ ಲಾವಣಿಯನ್ನು ವಿಜಾಪೂರ ಜಿಲ್ಲೆಯ ಬನಹಟ್ಟಿ ಗ್ರಾಮದ ಶ್ರೀ ಎ.ಆರ್. ಜೆಂಬಗಿಯವರು ಬರೆದಿರುವರು. ‘ಗಂಗಾತನಯ ಅಪ್ಪಣ್ಣ’ ಎಂಬ ಕಾವ್ಯನಾಮದಿಂದ ಪ್ರಸಿದ್ಧ-ರಾಗಿರುವ ಇವರು ಸ್ವಾತಂತ್ರ್ಯಯೋಧರು. ನಾಡಿನಲ್ಲಿಯ ಅನೇಕ ಗೀ ಗೀ ಮೇಳಗಳ ಮಾರ್ಗದರ್ಶಕರಾಗಿರುವ ಇವರು ಕವಿಗಳಾಗಿರುವಂತೆ ಉತ್ತಮ ಸಂಘಟಕರೂ ಆಗಿದ್ದಾರೆ. ಅರವತ್ತೂರು ಪುರಾತನರನ್ನು ಕುರಿತು ಬರೆದಿರುವಂತೆ ೧೨ನೆಯ ಶತಮಾನದ ಶರಣ-ಶರಣೆಯರನ್ನು ಕುರಿತು ಅನೇಕ ಗೀ ಗೀ ಪದಗಳನ್ನು ಬರೆದಿರುವರು. ವೃತ್ತಿಯಿಂದ ನೇಕಾರರಾದರೂ ಪ್ರವೃತ್ತಿಯಿಂದ ಮಾತ್ರ ಗೀ ಗೀ ಪದಗಳ ರಚನೆಯನ್ನು ಮುಂದುವರೆಸಿದ್ದಾರೆ.

—ಎ. ಎಸ್. ಹೂಗಾರ

# ಶ್ರೀ ಲಿಂಗರಾಜ ಸರದೇಸಾಯಿ ಸಿರಸಂಗಿ

ಪೃಥ್ವಿಯೊಳಗೆ ಜನಿಸಿದವಗೆ ಮೃತ್ಯು ಬೆನ್ನು ಹತ್ತಿಹುದು ।
ವ್ಯರ್ಥವಿದು ಜನ್ಮ ಹುಟ್ಟಿ ಸಾರ್ಥಕವೇನು ।
ಅನರ್ಥವಾಗುವದೊಂದು ದಿನ ತಪ್ಪಿಹದೇನು ।
ಪಾರಮಾರ್ಥಕ್ಕಾಗಿ ಹತ್ತು ಪುರನಿತ್ತ ಪುಣ್ಯೇನು ।
ಹತ್ತೊಂಬತ್ತು ನೂರಾ ಆರು ಅಗಷ್ಟ ಇಪ್ಪತ್ತಮೂರು ।
ಭಾದ್ರಪದ ಶುದ್ಧ ಚೌತಿಗೆ ಐಕ್ಯವಾದನು ।
ಸ್ವರ್ಗ ಸ್ವಾಧೀನಾದ ಲಿಂಗಭೂಪ ಸಿರಸಂಗೀಶನು ॥ ಪಲ್ಲ ॥

೧

ಹತ್ತೂರಪೇಕ್ಷಿತ ಜೀವ ಮೃತ್ಯು ಜನಕೆ ಸಿಗುವದಲ್ಲಾ ।
ಮೃತ್ಯುಹರನ ಭಕ್ತರುದ್ಧಾರಕ್ಕೆ ಜನಿಸಿದನು ।
ಅಜನು ಚಿತ್ತದಿಂದ ರೂಪವನ್ನು ತಿದ್ದಿ ಮಾಡಿದನು ।
ಮಿರ್ಜಿ ಸಂಸ್ಥಾನ ಶಿಗ್ಲಿ ಗ್ರಾಮದಲ್ಲಿ ಜನಿಸಿದನು ।
ದತ್ತದಿಂದಾ ದತ್ತಕ್ಕಾಗಿ, ಹತ್ತು ಹಳ್ಳಿಗೊಡೆಯನಾಗೈವತ್ತು ।
ಸಾವಿರುತ್ಪನ್ನಕ್ಕಾಧೀಶನಾದಾನು ।
ಸರದೇಶಗತ ನವಲಗುಂದ ಸಂಸ್ಥಾನಿಕನು ॥

ಫಕ್ತ ದೈವದಿಂದ ಇವರು ದತ್ತಕ್ಕಾದ್ದದಂತ ಸಂಕ್ಷಿಪ್ತ ಕಥೆಯನು ।
ಹೇಳುವೆನು ಅರಿಯದಾತನು ।
ಶಿಗ್ಲಿ ರೈತಾ ಘೂಳಪ್ಪನ ಪುತ್ರ ಭಕ್ತಕುಲದವನು ।
ಮಾತಾಪಿತೃರರಿತಿದ್ದಿಲ್ಲೀ ಸಂಸ್ಥಾನವನು ।
ಸ್ವಸ್ಥ ಉಂಡು ತಾನು ರಸ್ತೆಯಲ್ಲಿ ಆಡುವವನು ।
ಎತ್ತಿಬಂದು ಜಾಯಸತಿಯರ ಪುತ್ರನಾದನು ।
ಇಂಥಾ ಕಥೆಯ ಹೇಳುವೆ ಕೇಳೀರೀಗ ಸಭಿಕರನ್ನು ॥

ರೂಪದಿ ವಿರೂಪಾಕ್ಷ ವೈರಿ । ಕೋಪದಿ ಪಾಪಿಗಳ ವೈರಿ ।
ತಾಪದಲ್ಲಿ ಅಗ್ನಿಯ ಸ್ವರೂಪನಿದ್ದನು ।
ಭೂಪ ಶಾಂತಿಯಲ್ಲಿ ಚಂದ್ರ ದಾತೃದಲ್ಲಿ ಕರ್ಣನು ।
ಶಕ್ತಿ ಭೀಮ ಯುಕ್ತಿ ವಾಮ ವಚನದಲ್ಲಿ ರಾಮನು ।
ದೀಪಲಿಂಗ ಧಾರಣರ ತಾಪವನ್ನು ಲೋಪಮಾಡಿ ।
ಭೂಪಾದ್ವೀಪಾಂತರಲ್ಲಿ ಧೂಪನಿದ್ದನು ।
ಇಂಥಾ ಕರ್ಪೂರೊಡೆಯು ದೇಶದಲ್ಲಿ ಎಲ್ಲಿ ಸಿಕ್ಕಾನು ॥

ದೊರೆಯ ವರ್ಣನೆಯನ್ನು ನಾನು ಸ್ಮರಣೆಯಿಂದ ಮಾಡುವೆನು ।
ಕರುಣದಿಂದ ಕೇಳಿರೆಂದು ಬೇಡಿಕೊಂಡೇನು ।
ಹರಳು ಒಡೆದು ಹೋದ ಗೆಜ್ಜಿಯಂತೆ ಬಾಯಿ ತೆರೆದೇನು ।
ಅರಸು ತಾನೆಂಬ ಅಹಂಕಾರ ದೂರ ಮಾಡಿದನು ।
ಅರಿಯದವಗೆ ಅರಸಾಗಿ ಸಿರಿಯು ಭಾಗ್ಯವಂತನಾಗಿ ।
ಮೂವತ್ತು ವರ್ಷ ದೇಶಗತನಾಳಿದನು ।
ಪುರುಷರಲ್ಲಿ ತನ್ನ ಹೆಸರು ಮುಂದೆ ತಂದನು ॥

ಸತ್ಯದಲ್ಲಿ ಹರಿಶ್ಚಂದ್ರ, ಅಸತ್ಯವನ್ನು ನುಡಿದವರಿಗೆ ।
ಮೃತ್ಯುವಾಗಿ ವೈಯದೊಗಲು ಸುಲಿಸಿಬಿಟ್ಟಾನು ।
ದುಷ್ಟಕೃತ್ಯ ಪಾಪ ಕರ್ಮವನ್ನು ದೂರ ಮಾಡಿದನು ।
ತನ್ನ ಹತ್ತರಲ್ಲಿ ಸತ್ಯವಂತನಿರಿಸಿಕೊಂಡಾನು ।
ಧಾತ್ರಿಪಾಲನ ಕೀರ್ತಿ ಜಗತ್ತಿನಲ್ಲಿ ವ್ಯಾಪಿಸಿಹುದು ।
ವೀರಶೈವ ಸಭೆದಲ್ಲಿ ಸಾರುವದನ್ನು ।
ದಾನವೀರ ಪುಣ್ಯವಂತ ಲಿಂಗಭೂಪನು ॥

## ಏರು

ಮಾತುಕೇಳಿ ಪೃಥ್ವಿ ದೂರದಲ್ಲಿ ನಿಂತ ಬೃಹಸ್ಪತಿ ।
ರಸನಾಂತ್ಯದಲ್ಲಿ ಸರಸ್ವತಿ ।
ದ್ರೌಪತಿ ಸರಿ ಭಾಗೀರಥಿ ಬಾಯಿ ಮೇಲೆ ಪ್ರೀತಿ ।
ರೂಪದಲ್ಲಿ ಧನ್ಯರತಿ ಸತಿ ।
ಹಗಲಿರುಳು ರನ್ನದಾ ಹರಳು ಮಾಳ್ಪೆನಾ ಸ್ತುತಿ ।
ದೇವ ಮುನಿದ ನಮ್ಮ ಮೇಲತಿ ॥

ಸೂರ್ಯನುದಯದಿಂದಿ ತಾನು ಸೂರ್ಯಾಸ್ತನಾಗುವತನಕಾ ।
ಆರ್ಯರಲ್ಲಿ ಶ್ರೇಷ್ಠ ವೀರಶೈವ ಜನರಿನ್ನು ।
ಕಾರ್ಯದಕ್ಷರಾಗಲಿಲ್ಲವೆಂಬ ಚಿಂತಿಕಾಲನ್ನು ।
ಧೈರ್ಯದಿಂದಾ ವಹಿಸಿ ಈಶ್ವರಾಜ್ಞೆಗೈದಾನು ।
ಹತ್ತೊಂಬತ್ತು ನೂರಾ ಆರು ಅಗಸ್ಟ ಇಪ್ಪತ್ತಮೂರು ।
ಭಾದ್ರಪದ ಶುದ್ಧ ಚೌತಿಗೆ ಐಕ್ಯವಾದನು ।
ಸ್ವರ್ಗ ಸ್ವಾಧೀನಾದ ಲಿಂಗಭೂಪ ಸಿರಸಂಗೀಶನು ॥

೨

ಅವರಾದಿ ವಿಠ್ಠಪ್ಪಗೌಡ ಇರುವನಿವರ ಮೂಲಪುರುಷ ।
ಸರಿಯು ತಮ್ಮನ ಕೂಡ ಕಲಹ ಮಾಡಿ ಹೊರಟಾನು ।
ವಿಜಾಪುರ ಬಾದಶಹನಲ್ಲಿ ಸ್ವಾರನಾದನು ।
ವಿಜಯನಗರದರಸು ಬಾದಶಹನ ಶತ್ರುವಿದ್ದನು ।
ಕೇಳಿರಿಲ್ಲಿ ಸಭಿಕರೆಲ್ಲಾ ತಾಳಿಕೋಟಿ ಹತ್ತರಲ್ಲಿ ।
ಕಾಳಗಾಗಿ ಅಲ್ಲಿಆದಿಲಶಹಾ ಗೆದ್ದಾನು ।
ರಾಮರಾಜ ಸೋತು ಸತ್ತು ಮಣ್ಣುಗೂಡಿ ಹೋದನು ।
ತಾಳಿಕೋಟಿ ಕಾಳಗದಲ್ಲಿ ಅಲ್ಲಿಆದಿಲಶಹಾ ತಾನು ।
ವಿಠೂಗೌಡನ ಶೂರತನವ ಕಂಡು ಕೊಂಡನು ।
ಅರಸು ಮೆಚ್ಚಿ ಅರ್ಧರಾಜ್ಯವನ್ನು ಕೊಟ್ಟು ಬಿಟ್ಟಾನು ।
ನವಲಗುಂದ ರಾಜ್ಯ ಮೂರುಲಕ್ಷ ವರಹ ಉತ್ಪನ್ನ ।
ಜಾಗೀರ್ದ್ಹಾಕಿ ಕೊಟ್ಟ ಮೇಲೆ ಪುತ್ರ ಪೌತ್ರಾದಿಗಳು ।
ಸೌಖ್ಯದಿಂದ ಕಾಲಕಳೆದರ್ಹೇಳಲಿನ್ನೇನು ।
ಮೈಸೂರಲ್ಲಿ ಪ್ರಬಲನಾದ ಹೈದರಲ್ಲಿಯ ಮಗನು ॥

ಮೈಸೂರೀಶಾ ಟೀಪು ದೊರೆಯು ಸೈನ್ಯದೊಡನೆ ಬಂದು
ನವಲಗುಂದ ಸಂಸ್ಥಾನ ವಶವ ಮಾಡಿಕೊಂಡಾನು ।
ತನ್ನ ರಾಜ್ಯದೊಳಗೆ ಸೇರಿಸಿಲ್ಲಿಯ ಒಡೆಯನ್ನಟ್ಟದನು ।
ಸರದೇಸಾಯಿ ವೃತ್ತಿ ಕಳೆದಕೊಂಡು ಕೂತಾನು ।
ಟೀಪು ಉರಿಯುವದನ್ನು ಕಂಡು ನೈಝಾಮೇಂಗ್ಲ ಪೇಶ್ವಾಯವರು ।
ಐಕ್ಯಮತದಿಂದ ಕಾದೆ ಟೀಪು ಮಡಿದನು ।
ಶ್ರಿ ರಾಜರ್ ಹಂಚಿಗೊಂಡರ್ ಟೀಪುಗೆದ್ದ ಭೂಮಿಯನು ॥

ನವಲಗುಂದ ಸಂಸ್ಥಾನ ಪೇಶ್ವೆಯವರ ಸ್ವಾಧೀನವಾಗಿ ।
ಯುದ್ಧದಲ್ಲಿ ಆದ ಖರ್ಚಿಗೆ ವತ್ತಿ ಹಾಕಿದರು ।
ಜಾಯದೇಸಾಯರೆಂಬುವವರು ಅರ್ಜಿಕೊಟ್ಟಾರು ।
ಪರತ ಸಂಸ್ಥಾನ ಬಿಡಲಿಕ್ಕೆ ಕೇಳಿಕೊಂಡಾರು ।
ವತ್ತಿಯಿಂದ ಬಿಡಿಸಿ ನಿಮ್ಮ ಸಂಸ್ಥಾನ ಕೊಡುವೆವೆಂದು
ಹತ್ತು ಪುರವ ಹೊಟ್ಟೆ ಖರ್ಚಿಗಾಗಿ ಕೊಟ್ಟರು ।
ಅಷ್ಟರಲ್ಲಿ ಪೇಶ್ವೆಯರ್ಹೋಗಿ ಇಂಗ್ರಜಿಯವರು ಬಂದರು ॥

ಹೊಟ್ಟೆ ಖರ್ಚಿಗಾಗಿ ಪೇಶ್ವೆಕೊಟ್ಟ ಹತ್ತುಗ್ರಾಮುಗಳಿಗೆ ।
ಧಿಟ್ಟರಾಗಿ ತಾವು ಕಾಲ ಕಳೆದರೈವರು ।
ಒಟ್ಟ ಹನ್ನೊಂದು ತಲೆಯವರಾದ ಜಾಯದೇಸಾಯರು ।
ಹುಟ್ಟದೊಬ್ಬ ಮಗನು ಹೆಂಡರಿರಲು ಮರಣವಾದಾರು ।
ಮುಂದೆ ಮಗನು ತೀರಲಾಗಿ ಹಿಂದೆ ಉಳಿದ ಬಾಯಿಯವರು
ನಾನು ನೀನು ಒಡೆಯರೆಂದು ನ್ಯಾಯವಾಡಿದರು ।
ತಮ್ಮ ತಮ್ಮ ಪಕ್ಷದವರು ದತ್ತಕೆಂದು ನುಡಿದರು ॥

## ಏರು

ಇಬ್ಬರಲಿ ಕಲಹ ತಪ್ಪದಲಿ ನಡಿತು ಹೆಚ್ಚುತಾ ।
ಬುದ್ಧಿವಂತರ್ ಕೇಳಿ ಸಮ್ಮತಾ ।
ಇಬ್ಬರು ಕೂಡಿ ಬಂದರು ನೋಡಿ ಜಾಹೀರಾತಾ ।
ಸರಿಕಂಡವನು ಮಗನಂತಾ ।
ಆತುರದಿ ಜನರು ಬಂದು ಭರದಿ ಗ್ರಾಮ ತುಂಬುತಾ ।
ಐಶ್ವರ್ಯದೊಡನೆ ಜರಗುತಾ ॥

ಪಾಸ ಕಂಡರ ಸಂಸ್ಥಾನಕ್ಕೀಶನನ್ನು ಮಾಡುವರಂಥಾ
ದೇಶದಲ್ಲಿ ಸರ್ವಜನರು ವಾರ್ತೆ ಕೇಳಿದರು ।
ದಿವ್ಯಭೂಷಣಾದಿಗಳಿಂದ ಅಶ್ವವನ್ನೇರಿ ಬಂದಾರು ।
ಶಿಗ್ಲಿಯೊಳಗೆ ಇವರ ತಂದೆ ಬಡವರಿದ್ದರು ।
ಹತ್ತೊಂಬತ್ತು ನೂರಾ ಆರು ಅಗಸ್ಟ ಇಪ್ಪತ್ತುಮೂರು
ಭಾದ್ರಪದ ಶುದ್ಧ ಚೌತಿಗೆ ಐಕ್ಯವಾದನು ।
ಸ್ವರ್ಗ ಸ್ವಾಧೀನನಾದ ಲಿಂಗಭೂಪ ಶಿರಸಂಗೀಶನು ॥

೩

ಬಂದ ಉಮೇದವಾರರೊಳಗೆ ಅಂದಗಂಡ ರಾಮಪ್ಪನು ।
ರಾಮಪ್ಪನು ಇಂದುವಿನಂತೆ ಚಂದ್ರಶೇಖರ ಪಾಸಕಂಡಾನು !
ದತ್ತಪುತ್ರ ಬರಿದು ಇಟ್ಟ ಹೆಸರು ಲಿಂಗಭೂಪನು ।
ದಿವ್ಯವೈಭವದಿಂದ ಸಂಸ್ಥಾನಕ್ಕೊಡೆಯನಾದನು ।
ಹಿರಿಯ ಅಣ್ಣನ ಕೂಡ ಬಂದು ಸಿರಸಂಗಿಯೊಳಗೆ ।
ಬಂದು ದೂರದಲ್ಲಿ ಮಠದೊಳಗೆ ಇಳಿದಿದ್ದನು ।
ಇವರ ಪೂರ್ವದಲ್ಲಿಯ ಹೆಸರು ರಾಮಪ್ಪನು ॥

ಗಂಗಾಬಾಯಿ ಸಾಹೇಬರದು ಲಿಂಗಭೂಪನ ಮೇಲೆ
ಪ್ರೇಮ ಅಂಗಜಾತನಂಥ ಸಿರಸಂಗೀಶನು ।
ರಾಜಪುತ್ರ ಶಾಲೆಯ ಕೊಲ್ಹಾಪುರದಿ ಕಲಿಯುತಿದ್ದನು ।
ರಾಜಭಾಷೆ ಇಂಗ್ಲೀಷ ಕನ್ನಡಾದಿ ಮರಾಠಿಯನ್ನು ।
ಕಲಿಯುತಾತ ಇರುವುವಲ್ಲಿ ಪ್ರೀತಿ ತಾಯಿ ತೀರಲಾಗಿ
ಉಮಾಬಾಯಿ ಸಾಹೇಬರು ದ್ವೇಷದಿಂದಿನ್ನು ।
ಕಲಿಸಿದಾನು ಸಿದ್ಧರಾಮಪ್ಪನೆಂಬ ದುಷ್ಟನು ॥

ಖುಷಿ ದತ್ತಕ ಸುಳ್ಳೆಂದು ಹುಸಿ ಮಾತು ।
ಆಡುತ್ತ ದ್ವೇಷದಿಂದ ವಾಸಿಸಿದಳು ಸಿರಸಂಗಿಯಲ್ಲಿ ।
ಸುದ್ದಿ ಕೇಳಿ ಈಶ ಕೊಲ್ಹಾಪುರದಿ ಹೊರಡುತಲಿ ।
ಭರದಿ ಸಿರಸಂಗಿಗೆ ಬಂದ ತೀವ್ರದಲಿ ।
ಗ್ರಾಮದಲ್ಲಿ ಬರುವವನ ನೇಮದಿಂದಾ ನೂಕಿದಳು ।
ಕಾಮನಂಥವಾ ತಿರುಗಿದಾಸರಿಲ್ಲದಲ್ಲಿ ।
ದೇವ ತನ್ನಮೇಲೆ ಮುನಿದನೆಂಬ ಚಿಂತೆಯಲಿ ॥

ಕೈಯಲ್ಲಿ ದುಡ್ಡು ಇಲ್ಲಾ ಜನರ ಸಹಾಯವಿಲ್ಲ
ನ್ಯಾಯಕ್ಕೆ ಆಸರಿಲ್ಲಾ ನಿಂತ ಅಂತರಲ್ಲಿ ।
ಇವರನ್ನಾರು ಕೇಳುವರು ಬಾಯಿಯ ದುರದಲ್ಲಿ ।
ಯಾವ ಆಸರರಿಂದ ನಿಂತಾರು ವೈರದಲ್ಲಿ ।
ನದೇವೋ ನಂನಥವರ್ಾಯು ನೆನ್ನುತ ಭೂವರ
ನಿರ್ಧಾರನಾಗಿ ತಾ ನಿಲ್ಲುತಲ್ಲಿ ।
ಪರಸಗಡದ ಪರಪ್ಪ ಧೈರ್ಯ ಹೇಳುತಲಿ ॥

ಮೂರು ಕೋರ್ಟಿನ ವರೆಗೆ ನ್ಯಾಯ ।
ಧೀರತನದಿಂದ ನಡಿಸಿದಾನು ।
ಸಿದ್ಧರಾಮ ಚರಮೂರ್ತಿ ಹತವಾದಾನು ।
ಸಂಸ್ಥಾನದ ಸಿಲ್ಕೆಲ್ಲಾ ಅಯ್ಯನ ಸ್ವಾಧೀನು ।
ಕಾಗಿ ಹಿರಿಯತನದಂಥವನು ಮಾಡಿ ಬಿಟ್ಟಾನು ।
ಸಿಕ್ಕಂತೆ ವೆಚ್ಚಮಾಡಿ ಲೆಖ್ಖಿಲ್ಲದ್ಹಾಳು ಮಾಡಿ ।
ಬಳಿದುವಾಡೆ ದುಡ್ಡೆಲ್ಲಾ ತೊಳೆದು ಬಿಟ್ಟಾನು ॥

ಸಿದ್ಧರಾಮ ಸತ್ತಮೇಲೆ ಬುದ್ಧಿವಂತಳಾಗಿ ಬಾಯಿ ।
ಇದ್ದ ಮಗನಗೂಡ ರಾಜಿ ಆಗುತಲಿ ।

ಮತ್ತು ಸಿದ್ಧವಾಗಿ ದತ್ತಪತ್ರ ಕೋರ್ಟಿನಲ್ಲಿ ।
ವಾಡೆ ಸಂಪೂರ್ಣ ಸಿಕ್ಕಿತವನ ತಾಬೇದಲ್ಲಿ ।
ತಾಯಿ ತಾ ಹತ ತನ್ನ ಕೈಯಿಂದ ಒಂದು ಹಳ್ಳಿ ।
ಹೊಟ್ಟಿ ಖರ್ಚಿಗಾಗಿ ಕೊಟ್ಟಾ ಮಹಾಕಲಿ ।
ವಾಡೆ ಕಟ್ಟಿಸಿಟ್ಟ ತಾಯಿಯನ್ನು ಬೇವೂರಲ್ಲಿ ॥

ಏರು

ಅತಿ ಕಷ್ಟ ಕಾಡಿತು ಅರಿಷ್ಟಾ ಗೆದ್ದ ರಾಜೇಂದ್ರಾ ।
ಖಾಲಿ ವಾಡೆಕ್ಕಾದ ತಾ ಇಂದ್ರ ।
ಖರ್ಚಿಗಿ ಹಣಾ ಇಲ್ಲದಾಗಿ ಗ್ರಾಮದಲಿ ಬಂದಾ ।
ಕುಡಿಯಲಿಕ್ಕೆ ತಂಬಿಗಿಲ್ಲ ಒಂದಾ ।
ತುರ್ತಕ್ಕೆ ದುಡ್ಡ ಕಳಿಸುವದಕ ಪತ್ರ ತಾ ಬರೆದಾ ।
ಇಂಗಳೇಶ್ವರದ ಗೌಡ ಕಳಿಸಿದಾ ॥

ವಾಡೆ ಹೊಕ್ಕು ನೋಡಿದನು ಮಾಡದಲಿ ಇಲಿಯ ಹಿಕ್ಕಿ ।
ಕೋಠಿಯಲ್ಲಿ ಕಾಲಿ ಚೀಲು ಒಂದೂ ಉಳಿದಿಲ್ಲಾ ।
ಭೋಜನಾಲಯದಲ್ಲಿ ಪಂಕ್ತಿ ಚಾಪಿ ಸಹ ಕಂಡಿಲ್ಲಾ ।
ಹಂಡೆ ಭಾಂಡೆ ತಗಡು ತುಣಕು ಮಣ್ಣು ಪಾತ್ರೆ ಇಲ್ಲಾ ।
ಔಷಧಕ್ಕೆ ಕಾಳು ಇಲ್ಲ ವಿಷಕ್ಕೆ ದುಡ್ಡು ಇಲ್ಲಾ ।
ಕಸಕ್ಕ ಬಾರಿಗಿಲ್ಲಾ ಬೀಸುವ ಕಲ್ಲಾ ।
ನಾಶಮಾಡಿ ಬಿಟ್ಟು ಸಿದ್ಧರಾಮು ಸತ್ತನಲ್ಲಾ ॥

ನಳನ ಸತಿಯ ಬಿಡಿಸಿ ರಾಮುಚಂದ್ರನಡವಿಗಟ್ಟಿ ।
ಹರಿಶ್ಚಂದ್ರನ ಹೊಲಿಯರಲ್ಲಿ ದುಡಿಯಲಿಟ್ಟಾನು ।
ಬಲಿ ಚಕ್ರವರ್ತಿಯನ್ನು ಭೂಮಿಯಲ್ಲಿ ತುಳಿದಾನು ।
ವಿಧಿಯಂಥ ಕುಕ್ಷಿಯನ್ನು ನಾನು ಎಂದೂ ಕಾಣೆನು ।
ಹತ್ತೊಂಬತ್ತು ನೂರಾ ಆರು ಅಗಸ್ಟ ಇಪ್ಪತ್ತು ಮೂರು ।
ಭಾದ್ರಪದ ಶುದ್ಧ ಚೌತಿಗೆ ಐಕ್ಯವಾದನು ।
ಸ್ವರ್ಗ ಸ್ವಾಧೀನಾದ ಲಿಂಗಭೂಪ ಸಿರಸಂಗೀಶನು ॥

೪

ದೇವಲೋಕದಿಂದ ಇಳಿದ ಜೀವನಿದು ಭುವನದಲ್ಲಿ
ಭಾವ ಮೂಡಿ ತೋರಿ ಅಡಗಿ ಇಹದಲ್ಲಿ ।

ಸ್ವಭಾವದಲ್ಲಿ ಕಮಲಾಕ್ಷ ಜಿಹ್ವದಲ್ಲಿ ।
ಸರಸ್ವತಿ ಮಚ್ಛನಿದ್ದು ತೊಡೆಯಲ್ಲಿ ।
ನಾವು ನೀವು ನೋಡಿದೆವು ಸುಳ್ಳುಮಾತು ಒಂದು ಇಲ್ಲ
ಸರಿಯು ಮಾತು ಶಿವನ ಭಕ್ತಿ ಮನದಲ್ಲಿ ।
ಎನ್ನ ಕಿವಿಯು ಕೊಯ್ಯಬೇಕು ಸುಳ್ಳು ಕಂಡಲ್ಲಿ ॥

ಸತಿಯರನ್ನು ಬಿಟ್ಟು ಪರಸ್ತ್ರೀಯರನ್ನು ನೋಡಲಿಲ್ಲ ।
ಹಿತದ ಮಾತು ಬೋಧಿಸಿದನು ಜನರಲ್ಲಿ ।
ಹೆತ್ತ ತಂದೆಗೊಂದು ಮನೆಯ ಕಟ್ಟಿಸಿಟ್ಟಿದಲ್ಲಿ ।
ಗೋರಾ ಜನರಗೂಡ ಗೆಳೆತನ ನೇಮದಲ್ಲಿ ।
ಹತ್ತೊಂಭತ್ತು ವಯಾದಲ್ಲಿ ಸಂಸ್ಥಾನ ತಾಬೇಯಾಗಿ ।
ಚಿತ್ತದಿಂದ ದೇಶಗತ ಪಾಲಿಸುತಲಿ ।
ವಸೂಲಿಪ್ಪತ್ತೈದು ಸಾವೀರಿತ್ತು ಪೂರ್ವದಲ್ಲಿ ॥

ಬೆಳ್ಳೇರಿ ಹೊಂಗಲ ಚಿಕ್ಕಉಳ್ಳಿಗೇರಿ ಹೂಲಿಯಕಟ್ಟಿ ।
ಹಳ್ಳದ ದಂಡೆಯಲಿರುವ ಕುರುವಿನಕೊಪ್ಪಾ ।
ಬೆಳ್ಳಗುಡ್ಡ ಳ್ಳಗರಿಯಲಾರದಂಥ ಗೋವಿನಕೊಪ್ಪ ।
ಒಳ್ಳೇ ಬಾಳ್ವೆಯುಳ್ಳ ಹೊಸಬಾಳ ಕೆಂಚನಕೊಪ್ಪ ।
ನಳ್ಳ ಸಿರಸಂಗಿ ನೆರೆಹಳ್ಳಿ ಕಲ್ಲಾಪುರ ಧೊರಿ ।
ನವಲಗುಂದ ಪರಸಗಡ ಚಾವರಾತ ಭೂಪಾ ।
ವರ್ಷ ಮತ್ತೆಯಾಗುವದು ಸತ್ಯಬಾವಿಯ ಕೂಪಾ ॥

ತಾಯಿ ನ್ಯಾಯದಲ್ಲಿ ತನ್ನ ಪಕ್ಷ ಹಿಡಿದ ।
ಪಂತನಿಗೆ ಹತ್ತು ನಂಬರೀನಾವು ಹಚ್ಚಿಕೊಟ್ಟಾನು ।
ಸಾಲಿ ಕಲಿಯುವಾಗ ಹಸ್ತ ನೋಡಿದ ವಿಷ್ಣು ಪಂತನು ।
ರಾಜನಾಗುವಂಥ ಲಕ್ಷಣಾತ ಹೇಳಿದ್ದನು ।
ಭವಿಷ್ಯ ಮಾತು ನಿಶ್ಚಯಾಗಿ ವರ್ಷಾ ಇನ್ನೂರು ರೂಪಾಯಿ ।
ಹರ್ಷದಿಂದ ಸಾಯುತನಕಾ ಸಂಬಳ ಕೊಟ್ಟಾನು ।
ವಚನಕೊಟ್ಟಂತೆ ಪಾರುಮಾಡಿ ದೇಹ ಬಿಟ್ಟಾನು ॥

ಯುಕ್ತಿಯಿಂದಾ ದೇಶಗತದುತ್ಪನ್ನದ ಬೆಳೆಸಿದಾನು ।
ರೈತಕೀಯ ತರ್ಮ ಆಕಾರ ಏರಿಸಿಟ್ಟಾನು ।
ಖರಾಬ ನಂಬರ ಕಿರ್ದಿ ಮಾಡಿ ಲಾವಣಿ ಸಾಗಿಸಿದನು ।

ಮೂರು ಊರಲ್ಲಿ ಸ್ವಂತ ಕಮತಾ ನಡಿಸುತಿರ್ದನು ।
ಮೂರು ಕೆರೆಯು ಕಟ್ಟಿಸಿ ತಾ ಮೂರು ಲಕ್ಷ ಖರ್ಚು
ಮಾಡಿ ಬಿಡಿ ನೀರಿನಿಂದ ಕಬ್ಬು ಬೆಳೆಸುತ್ತಿದ್ದನು ।
ಮತ್ತು ಆರುತಿಂಗಳತನಕಾ ನಡ್ಸಿದಾಲಿಗಾಣು ॥

ಬಂಟ ತಾನು ಒಂಟಿಯನ್ನು ರೆಂಟಿಗಾಗಿ ಸಾಕಿದನು ।
ಎತ್ತು ಕೋಣೆಂಭತ್ತುಗಳನು ಕಮತಕಿಟ್ಟಾನು ।
ತಗ್ಗು ದಿನ್ನೆಗಳನು ಸಾಫ ಮಾಡಿ ಸಾಗು ಮಾಡಿದನು ।
ಠೇವು ಖಾತೆ ಇಟ್ಟು ಬಡ್ಡಿಯಂತೆ ಸಾಲ ಕೊಟ್ಟಾನು ।
ಬೇರೆ ಬೇರೆ ಖಾತೆ ಇಟ್ಟು ಕಾರಕೂನರನ್ನು ನೇಮಿಸಿಟ್ಟು ।
ಒಟ್ಟ ಉತ್ಪನ್ನ ಒಂದು ಲಕ್ಷ ಕಟ್ಟಿ ಇಟ್ಟಾನು ।
ದಿವಾರಾತ್ರಿಯಲ್ಲಿ ನಿದ್ರೆ ಇಲ್ಲಾ ದುಡಿಯುತಿರ್ದನು ॥

ಏರು

ಜೋಗುಳ ಬಾವಿ ದರಸಾಲ ಲಿಲಾವ ಸಾವಿರಕ್ಕ ।
ಕಾಳಿದೇವಿ ಜಾತ್ರೆಗಿಟ್ಟು ಸುಂಕಾ ।
ಗುಡ್ಡದಲ್ಲಿ ಕಟ್ಟಿಗಿದ್ದಲ್ಲಿ ಮೇಲೆ ಇವರ ಹಕ್ಕಾ ।
ಜಂಗಲ ಖಾತೆಯಿಂದಾ ಬೇರೆ ರೊಕ್ಕಾ ।
ಮಾವಿನತೋಫಿನುತ್ಪನ್ನ ತಪ್ಪದೊರುಷಕ್ಕ ।
ಕಮತದ ಮೇಲೆ ಒಳೆ ಲೆಕ್ಕಾ ॥

ರೈತಾಕಿ ಜಮೀನ ಮೇಲೆ ರೈತರ ಹಕ್ಕ ತೆಗೆದುಹಾಕಿ
ಜಾತ ಇನಾಮು ಸನದು ತಾನು ಪಡೆದುಕೊಂಡಾನು ।
ಸೂಜಾತ ಲಿಂಗವಂತ ಜಂಗಮಕ್ಕೆ ಪ್ರಿಯನು ।
ಈ ಭೂತಳದಲ್ಲಿ ಕ್ರೀಡೆಯನಾಡಿ ಮಾಯವಾದಾನು ।
ಹತ್ತೊಂಭತ್ತು ನೂರಾ ಆರು ಅಗಸ್ಟ ಇಪ್ಪತ್ತುಮೂರು
ಭಾದ್ರಪದ ಶುದ್ಧ ಚೌತಿಗೆ ಐಕ್ಯವಾದನು ।
ಸ್ವರ್ಗ ಸ್ವಾಧೀನನಾದ ಲಿಂಗಭೂಪ ಸಿರಸಂಗೀಶನು ॥

೫

ಖರ್ಚಿನ ಬಾಬ್ತುಹೇಳತೀನಿ ವೆಚ್ಚಕ್ಕೆಯೆಣೆಯಿಲ್ಲ
ಬಚ್ಚಿಟ್ಟ ತಿಜೋರಿ ಸೂರಿ ಮಾಡಿದರು ।
ಹುಟ್ಟಿದೂರ ಭೆಟ್ಟಿಗಾಗಿ ಹೋಗಲಿಚ್ಛಿಸಿದರು ।
ರಿತ್ತಿ ಸ್ವಾರಿ ನೆವದಿಂದ ಸಿಗ್ಲಿಗ್ಹೊರಟಾರು ।

ಸುತ್ತಮುತ್ತಲಿನ ಊರ ತೃಪ್ತಿಗೊಳಿಸಿದರು ।
ಪ್ರೀತಿಯಿಂದ ವಸ್ತ್ರವನ್ನು ಹೊರಿಸಿಬಿಟ್ಟಾರು ।
ಅರವತ್ತು ಸಾವಿರ ಹಣ ತೂರಿಬಿಟ್ಟಾರು ॥

ನ್ಯಾಯ ಹಿಡಿದ ತಾಯಿ ಉಮಾಬಾಯಿಯವರು
ತೀರಿದರೆ ಸಾರ್ಥಕ್ಕೆ ಆರು ಸಾವಿರ ದಾನಕೊಟ್ಟಾರು ।
ಬೆನಕ ಚತುರ್ಥಿಯುತ್ಸವ ಮಾಡುತ್ತಿದ್ದಾರು ।
ಸಕಲ ಸಂಸ್ಥಾನ ಗಾನದಾರರು ಬರುತಿದ್ದರು ।
ನೇಮಣೂಕ ಇದ್ದಂತೆ ಬ್ರಾಹ್ಮಣ ಜಂಗಮರಿಗೆ
ಪಂಚದಿವ್ಯ ಮೃಷ್ಟಾನ್ನವ ಉಣಿಸುತ್ತಿದ್ದರು ।
ಘನಯಾತ್ರೆ ಖರ್ಚು ದರಸಾಲ ಮಾಡುತ್ತಿದ್ದರು ॥

ದಾಸೋಗಿತ್ತು ಲಿಂಗಾಂಗರೇಸುಮಂದಿ ಬಂದರು
ಉಪವಾಸ ಬೀಳುತ್ತಿದ್ದಿಲ್ಲಲ್ಲಿ ವಸ್ತಿ ಕೊಟ್ಟವರು ।
ಸೀದಾ ಒಯ್ಯುವರು ಬ್ರಾಹ್ಮಣ ದಾರಿಕಾರರು ।
ಕೋಠಿ ಮೇಲೊಬ್ಬ ಕಾರಕೂನನ್ನಿಟ್ಟು ಬಿಟ್ಟಾರು ।
ನೂರಾರು ಗೋವುಗಳು ನೇಮದಿಂದ ಕರೆಯುವವು
ಬಂದವರಿಗೊಂದು ತಂಬಿಗಿ ಹಾಲು ಕೊಟ್ಟಾರು ।
ಬೇರೆ ಖೋಲಿ ಕಟ್ಟಿಸಿಯೊಬ್ಬನ್ನಲ್ಲಿ ಇರಿಸಿದ್ದರು ॥

ಕಾಶೀ ಯಾತ್ರೆಗಾಗಿ ತನ್ನ ದಾಸಿ ದಾಸರಾ
ಶ್ರೀ ತರುಮೇಶನನ್ನು ನೋಡಲು ಸಮೇತ ಹೊರಟರು ।
ಕಾಶೀ ತೀರ್ಥವನ್ನು ಒಯ್ದು ರಾಮೇಶಗೆರಿದರು ।
ರಾಮೇಶ್ವರನ ಮಳಲ ಪುನಃ ಗಂಗೆಯಲ್ಲಿ ಬಿಟ್ಟಾರು ।
ಕಾಶಿಯಾತ್ರೆಯೊಂದು ಮುಗಿಸಿ ವಿಶ್ವನಾಥನ ಹೆಸರಿನಿಂದ ।
ದೇಶಗತ ಭೂಮಿಗತ ಭೂಮಿ ಒಂದು ಇನಾಮು ಕೊಟ್ಟಾರು ।
ಲಾವಣಿ ವಸೂಲ ಮಾಡಿ ವರ್ಷಾ ಕಾಶಿಗೆ ಕಳಿಸಿಕೊಡುವರು ॥

ದೇಶಗತ ನೇಮವನ್ನು ಖಾಸ ನಾನು ಹೇಳುವೆನು
ಜ್ಯೇಷ್ಠ ಬಾಯಿಸಾಹೇಬರು ಉಕ್ಕಲಿಯವರು ।
ಹೀಂಗ ವಂಶ ಪರಂಪರೆಯಾಗಿನಹಿಡ ಬಂದಾರು ।
ಸಂತಾನಾಗದಕ್ಕ ಆರು ಮಂದಿ ಹೆಂಡರಾದಾರು ।
ಉಕ್ಕಲಂಕಲಗಿ ಹಿರಸಂಗ ಶಿರಹಟ್ಟಿ ಇವರೈದು

ಮುಂದಿ ಅಂತರ ಪಟದಿಂದಾ ಮದುವೆ ಮಾಡಿಕೊಂಡಾರು ।
ಪಂಚಕಳಸ ಹೂಡಿ ಲಗ್ನವಾದ ಕಲಬುಳಿಗಿಯವರು ॥

ಪಂಚಗುರು ಪಂಚಪೀಠಾ ಪಂಚಗೋತ್ರಾ ಪಂಚಸೂತ್ರಾ
ಪಂಚಮ ಸಾಲಿ ಲಿಂಗಾಂಗ ಮುಖ್ಯರು ।
ಅಷ್ಟಾವರಣಕ್ಕೆ ಹೊಂದಿದವರು ಒಂದೇ ಕುಲದವರು ।
ಹಲವು ದಂಥೆಯಿಂದ ಜಾತಿವರ್ಗ ಮಾಡಿಕೊಂಡಾರು ।
ಅನ್ನ ನೀರು ಮುಟ್ಟದಂಥಾ ಅನ್ಯಮತಸ್ಥರಿಂದಾ
ಮಂಗಲಸೂತ್ರ ಧಾರಣ ಬಿಟ್ಟು ಬಿಟ್ಟಾರು ।
ಶಾಸ್ತ್ರಶೋಧ ಮಾಡಿಸಿದ್ಧವೆಂದು ಕಂಡುಕೊಂಡಾರು ॥

ಏರು

ಇಂಗ್ಲಂಡದರಸು ಎಡ್ವರ್ಡ ಬಾದಶಹಾ ರಾಜಧಾನಿ ಲಂಡನ್ನ
ಚಕ್ರವರ್ತಿಯಾದ ಹಿಂದುಸ್ತಾನ ।
ಮಹಾರಾಣಿ ಪುತ್ರ ಬಹುಮಾನಿ ಏರಿದನು ಒಂದರಲ್ಲಿ ಸಿಂಹಾಸನಾ ।
ದಿಲ್ಲಿಯಲ್ಲಿ ಉತ್ಸವದ ಖೂನಾ ।
ದರಬಾರ ಸೇರಿಸಿ ಬರಪೂರ ಇಂಡಿಯಾ ಮುನ್ನೂರುವರಿಸಂಸ್ಥಾನಾ ।
ಸಭೆಗಿತ್ತು ಇವರಿಗೆಂತೌತಣಾ ॥

ಪಾಶ್ಚಮಾತ್ಯ ಜನರ್‌ಕೂಡಾ ನಿಶ್ಚಯವಾಗಿ
ಸ್ನೇಹವಿಟ್ಟು ನಿಶ್ಚಿಂತನಾಗಿ ಸ್ವರ್ಗವಾಸಿಯಾದಾನು ।
ಸಮಾನರಲ್ಲಿ ಯಶಸ್ಸು ಪಡೆದುಕೊಂಡಾನು ।
ಹತ್ತೊಂಭತ್ತು ನೂರಾ ಆರು ಆಗಸ್ಟ ಇಪ್ಪತ್ತು ಮೂರು
ಭಾದ್ರಪದ ಶುದ್ಧ ಚೌತಿಗೆ ಐಕ್ಯವಾದನು ।
ಸ್ವರ್ಗಸ್ವಾಧೀನಾದ ಲಿಂಗಭೂಪ ಸಿರಸಂಗೀಶನು ॥

೬

ಹಳ್ಳಿಯಲ್ಲಿ ವಾಸಿಸುವದು ಒಳ್ಳೇದಲ್ಲವೆಂದು ತಿಳಿದು
ಜಿಲ್ಹೆಯಾದ ಬೆಳಗಾಂವಿಯಲ್ಲಿ ಇದ್ದರು ।
ಜಿಲ್ಲಾ ಕಲೆಕ್ಟರ ನಾಮದಾರ ಕಮೀಶನರು ।
ರಾವಬಹಾದ್ದೂರ ಅರಟಾಳ್‌ಇಲಾಖೆ ಸಾಹೇಬರು ।
ರಾಜಧಾನಿಕರೆಲ್ಲಾ ಮೇಜವಾನಿ ಮಾಡಿಸುತ್ತ ।
ಒಂಟಮುರಿ ಶ್ರೀಮಂತರೊಟ್ಟುಗೂಡುವರು ।
ತಲ್ಲೂರ ಯಜಮಾನ ನೇಮದಿಂದ ಸಂಗಡಿರುವರು ॥

ಬೆಳಗಾವಿ ಲಷ್ಕರ ನಡುವೆ ನಾಲ್ಕು ಎಕರೆ ಭೂಮಿ ।
ಕೊಂಡು ಹೊಳೆಯುವಂಥ ಬಂಗ್ಲೆಯನ್ನು ಕಟ್ಟಿಸಿರುವರು ।
ಮೇಲು ಮಾಡಿ ಅಶ್ವಶಾಲೆಯನ್ನು ಸಿದ್ಧಗೊಳಿಸಿಹರು ।
ಇಂದ್ರವನದಂತೆ ಪುಷ್ಪ ವೃಕ್ಷ ಹಚ್ಚಿಸಿರುವರು ।
ಸುತ್ತು ಮುತ್ತು ಕಂಪೌಂಡ ಉತ್ತರಕ್ಕೆ ಮಹಾದ್ವಾರ ।
ಮಧ್ಯದಲ್ಲಿ ಕೂಪವನ್ನು ತೋಡಿಸಿರುವರು ।
ಎಪ್ಪತ್ತೈದು ಸಾವಿರ ರೂಪಾಯಿ ಖರ್ಚು ಮಾಡಿದರು ॥

ಡಿ. ಪಿ. ಗುರುಸಿದ್ಧಾಖ್ಯ ಮತ್ತು ಅರಟಾಳ ಸಾಹೇಬರು
ಕಲ್ಪಿಸಿದ ಫಂಡಿನವರು ಸಹಾಯ ಕೊಟ್ಟಾರು ।
ಅಮ್ಮಣಗೇರಿಯೆಂಬ ಗ್ರಾಮುವನ್ನು ಖರೀದಿ ಕೊಂಡಾರು ।
ತಮ್ಮ ಖುಷಿಯಿಂದ ಫಂಡಿಗಾಗಿ ಹಚ್ಚಿಕೊಟ್ಟಾರು ।
ಜೀವಂತನಿರುವಾಗ್ಗೆ ಅಮ್ಮಣಗೇರಿ ಉತ್ಪನ್ನ ಫಂಡಿನವರು ।
ಬೇರೆ ವಸೂಲಿ ಮಾಡಿಕೊಳ್ಳುವರು ।
ದೇಶಗತದಿಂದಾ ಪರಭಾರೆ ಮಾಡಿಬಿಟ್ಟಾರು ।
ಧಾರವಾಡ ಮಹಾಸಭಾಕ್ಕಾರು ಸಹಸ್ರಕೊಟ್ಟು
ಮೈಸೂರು ಇಲಾಖೆಕ್ಕೆ ಎರಡು ಸಾವೀರು ।
ಯುವರಾಜ ದರ್ಶನಕ್ಕೆ ಮುಂಬಯಿ ಸ್ವಾರಿ ಹೋದಾರು ।
ಶ್ರೀಮಂತೋಂಟಮುರಿ ಮಲ್ಲಪ್ಪಣ್ಣಾ ವಾರದರು
ಬೋರ್ಡಿಂಗ ಸಭೆಗೈದು ಮೂರು ಸಾವಿರ ಹಣವು ।
ಧೀರ ಮನಸಿನಿಂದ ಕೊಟ್ಟು ಬಂದಾರು ।
ಧೈರ್ಯ ಎಷ್ಟೆಂತ ಹೇಳಲಿಯ್ಯೊ ಕಾರ್ಯದಕ್ಷರು ॥

ದುರ್ಮುಖಿ ನಾಮ ದುಷ್ಕಾಳದಿ ಗೋರಾಬಾಳ
ಬಸಿದೋಣಿ ಸಿರಸಂಗಿ ಹೂಲಿಕಟ್ಟಿ ಬಡಜನರು ।
ಆಜು ಬಾಜು ಇರುವ ಸಣ್ಣ ಸಣ್ಣ ಹಳ್ಳಿಯವರು ।
ಕೂಳು ಇಲ್ಲದಾಗಿ ಬಾಯಿ ಬಿಡುವದನ್ನು ಕಂಡಾರು ।
ದೂರದಿಂದ ಹರಿದು ಬಂದ ದೊಡ್ಡದೊಂದು ಹಳ್ಳಾಕಟ್ಟಿ ।
ಮೂರು ಮೈಲು ಅರಣಿಯನ್ನು ಹಾಕಿಸಿರುವರು ।
ಆರು ವರ್ಷ ಬಿಡದೆ ಕಾಮುಗಾರಿ ಮಾಡಿಸಿರುವರು ।
ಮೂರು ಮೈಲು ನೀರು ಕಟ್ಟಿ ಯಂತ್ರದಿಂದಾ ನೀರು ಬಿಟ್ಟು ।
ಭತ್ತ ಕಬ್ಬು ಪೈರುಗಳನು ಬೆಳೆದುಕೊಂಡಾರು ।

ಕೆರೆಯು ಕೆಳಗೆ ಒಂದು ಬಂಗ್ಲೆಯನ್ನು ಕಟ್ಟಿಸಿರುವರು ।
ಪ್ಲೇಗ ರೋಗ ತಗಲಿದಾಗ ಅಲ್ಲಿ ಹೋಗಿ ನಿಲ್ಲುವರು ।
ಮೂರು ಲಕ್ಷ ಹಣದಿಂದ ಧೀರರು ಸ್ವತಃ ನಿಂತು ।
ನೋಡತಕ್ಕ ಕೆರೆಯನ್ನು ಕಟ್ಟಿಸಿರುವರು ।
ಹುಣಸಿ ಪಕ್ಕ ಮಾಡಿ ಹಣವನ್ನು ವೆಚ್ಚ ಮಾಡಿದರು ॥

## ಏರು

ಕುಲದವನು ವಿದ್ಯೆ ಕಲಿತವನು ಸಿಕ್ಕರವ ಮಗನು ।
ಬಿ. ಎ. ಆಗಲಿಲ್ಲ ಒಬ್ಬವನು ।
ಉಕ್ಕಲೀ ಬಾಯಿ ಹೊಟ್ಟೇಲಿ ಹುಟ್ಟಿದೊಬ್ಬ ಮಗನು ।
ಹರುಷೆಷ್ಟು ಹೇಳಲಯ್ಯೊ ನಾನು ।
ಸವದತ್ತಿ ಪೇಟಿಯಾ ಸುತ್ತಿ ಹಂಚಿ ಸಕ್ಕರೆಯನು ।
ಪುತ್ರೋತ್ಸವದ ವರ್ಣನವನು ॥

ಹತ್ತು ದಿವಸ ಜೀವದಿಂದ ಇತ್ತ ಕೂಸು ।
ಊರ ಊರ ಪತ್ರ ಬರೆದು ಮನುಷ್ಯರನ್ನು ಕಳಿಸಿಕೊಟ್ಟಾರು ।
ಎತ್ತಿದಂಥ ಕೈ ಇಳವಲಿಲ್ಲಾ ದಾನ ಮಾಡಿದನು ।
ಶಿಲ್ಕ ಇದ್ದಷ್ಟು ಹಣವೆಲ್ಲಾ ಹಂಚಿ ಬಿಟ್ಟಾನು ।
ಹತ್ತೊಂಭತ್ತು ನೂರಾ ಆರು ಅಗಸ್ಟ ಇಪ್ಪತ್ತು ಮೂರು
ಭಾದ್ರಪದ ಶುದ್ಧ ಚೌತಿಗೆ ಐಕ್ಯವಾದನು ।
ಸ್ವರ್ಗ ಸ್ವಾಧೀನಾದ ಲಿಂಗಭೂಪ ಸಿರಸಂಗೀಶನು ॥

## ೭

ಸಾರ್ವಜನಿಕ ಮಹಾಸಭಾ ಪೂರ್ವದಲ್ಲಿ
ಬಸವರಾಜಾ ನೆರವೇರಿಸಿದ್ದನೆಂದು ಹೇಳುತ್ತಿರುವರು ।
ಧಾರವಾಡ ಜನರು ಪ್ರಥಮದಲ್ಲಿ ನಿರ್ಮಿಸಿದರು ।
ಪೂರ್ವಿಪಾಲಯ ಲಿಂಗೇಂದ್ರ ಅಧ್ಯಕ್ಷರು ।
ಸರ್ವಜನರ ಮಧ್ಯದಲ್ಲಿ ಸೂರ್ಯನಂತೆ ಒಪ್ಪಿದಾನು ।
ಧೈರ್ಯದಿಂದ ಭಾಷಣವನ್ನು ಸೂಚಿಸಿರುವರು ।
ಮಹಾಸಭಾ ಚರಿತ್ರದಲ್ಲಿ ಇದನು ಛಾಪಿಸಿರುವರು ॥

ಎಕ್ಕೋಣಿ ಶೇ ಪಾಚ ಇಪ್ವಿ ಯಕಣಾತೀಸ
ಡಿಸೆಂಬರಕ್ಕೇಕಾಗಿ ಬೆಂಗಳೂರ ವೀರಶೈವರು ।

ಎರಡನೆ ಮಹಾಸಭೆಯನ್ನು ತಾವು ನಿಶ್ಚೈಸಿದರು ।
ಸಭೆಗಧ್ಯಕ್ಷರಾಗಲಿಕ್ಕೆ ಕೇಳಿಕೊಂಡಾರು ।
ಶ್ರೀಮಂತ ಒಂಟಮುರಿ ಶ್ರೀಮಂತ ವಾರದ ।
ರಾವಬಹಾದ್ದೂರರಟಾಳರೊಲ್ಲೆಂದರು ।
ಸಭಾ ಸೆಕ್ರೆಟರಿ ನಂಜುಂಡ ಡಾಕ್ಟರರು ॥

ನವ್ಹಂಬರವರೆಗೆ ಸಭಾ ನಾಯಕರಿಲ್ಲದಾಗಿ
ಚೇರಮನ್ ಸಭಿಕರು ಬೇಡಿಕೊಂಡಾರು ।
ಸಭಾಧೀಶನಾಗಲಿಕ್ಕೆ ವಿನಯ ಮಾಡಿಕೊಂಡಾರು ।
ಅನಿರ್ವಾಹ ಅಧ್ಯಕ್ಷ ವಹಿಸಿಕೊಂಡಾರು ।
ಒಡೆಯನಾಗಲಿಕ್ಕೆ ರಾಜ ಒಡಂಬಡಲು ।
ಸಹಾಯಕರಿಗೆ ಧನದ ಕುಂಭ ಕಂಡ ಬಡವನಂತೆಯಾದಾರು ।
ಧನ್ಯರಾದೆವೆಂದು ಮಾನ್ಯರನ್ನು ಕರಿಸಿಕೊಂಡಾರು ॥

ಸ್ವಾರಿದೇಹರಕ್ಷಕರು ಪಾಕಸ್ವಾಧೀನೀಕರೆಲ್ಲಾ
ಪಾರಮಾರ್ಥ ಕಾರ್ಯಕ್ಕಾಗಿ ಸಾಗಿ ಪೋದಾರು ।
ಅಣ್ಣಿಗೇರಿ ಸ್ಟೇಶನಕ್ಕೆ ರೈಲು ಹತ್ತಿಕೊಂಡಾರು ।
ಹುಬ್ಬಳ್ಳಿ ಹಾವೇರಿ ಬ್ಯಾಡಗಿ ರಾಣೇಬೆನ್ನೂರು ।
ಬೆಂಗಳೂರ ದೊಡ್ಡ ದೊಡ್ಡ ನಿಲ್ವನೆಯ ಗ್ರಾಮದವರು ।
ದರ್ಶನಕ್ಕೆ ಐದಿದ್ದರು ।
ಪುಷ್ಪ ಮಾಲೆಯಿಂದ ಅಪ್ಪಿಕೊಂಡು ಸಾಗಿ ಪೋದಾರು ॥

ಪುಣ್ಯ ಕಾಲದಲ್ಲಿ ಅಗ್ರಗಣ್ಯರೆಲ್ಲಾ ವಿನಯದಿಂದ
ಮಾನ್ಯನಂ ನಿರೀಕ್ಷಿಸುತ್ತಾ ನಿಂತು ಕೊಂಡಾರು ।
ಸೂರ್ಯನುದಯ ಕಾಲದಲ್ಲಿ ಗಾಡಿಯನ್ನಿಳಿದರು ।
ಕವೀಶನ್ನರಾದ ಬಹುಮಾನ್ಯ ಪುಟ್ಟಣಾಖ್ಯರು ।
ಸರ್ವಸಭಾ ಜನರೆಲ್ಲ ಗರ್ವಹರಣರಾಗಿ ತಾವು ।
ಹರುಷವಾಯಿತೆಂದುಕೊಂಡು ಎದುರುಗೊಂಡರು ।
ಈ ವೈಭವಕ್ಕೆ ದೇವತೆಯರು ಪುಷ್ಪ ಕರೆದರು ॥

ಬೆಂಗಳೂರ ಮಹನೀಯರು ಲಿಂಗಭೂಪನನ್ನು
ಮತ್ತು ಸಂಗಡಿರುವ ತಲ್ಲೂರ ಶ್ರೀಮಂತರು ।
ರಾವಬಹಾದ್ದೂರ ಅರಟಾಳ ರುದ್ರಗೌಡರು ।

ಸರ್ವ ಮಂಡಳಿಯು ಮೆರವಣಿಗೆಯನ್ನು ತೆಗೆದರು ।
ಇಷ್ಟೆಂದು ಹೇಳಲಾರೆ ಕೃಷ್ಣನಾಲೋಚಿತನ ।
ನೈಷ್ಠಿಯಿಂದ ಬಂಗ್ಲೆಯಲ್ಲಿ ಇಳಿಸಿಕೊಂಡರು ।
ಈ ಸೃಷ್ಟಿಯಲ್ಲಿ ಕಾಣರಿಂಥಾ ಪುಣ್ಯವಂತರು ॥

ಮೂರು ದಿವಸ ಸಭಾದಲ್ಲಿ ಧೀರರು ಸ್ವಮುಖ
ಲೆಕ್ಚರಿಯನು ಕೊಟ್ಟರಲ್ಲಿ ಘಾಬರ್ಯಾದರು ।
ಪೂರ್ವ ಪುಣ್ಯದಿಂದ ಕಂಡೆವೆಂದು ಹೊಗಳಿಕೊಂಡರು ।
ಜನರ ಸಂಘವೆಂಬ ನಕ್ಷತ್ರಕ್ಕುಡುರಾಜರು ।
ಬೃಹಸ್ಪತಿಯ ಮುಖಕ್ಕೆ ಕಾಳಿದಾಸ ರಸನೆ ಸರಸ್ವತಿಯು
ಸ್ವರದಲ್ಲಿ ಮಾಯವಾದರು ।
ವಕ್ರ ತುಂಡ ತಾನು ಜ್ಞಾನದಲ್ಲಿ ಮುಳುಗಿಕೊಂಡಾರು ॥

## ಏರು

ಮೈಸೂರ ಸೀಮೆ ಕಾರಭಾರ ಮಾಳ್ಪ ಪೂರ್ಣಯ್ಯ ಸಭೆಗೆ ಬಂದಿದ್ದಾ ।
ಭಾಷಣ ಕೇಳಿ ಬೆರಗಾದಾ ।
ಮಹಾರಾಜ ಅರಸು ಚಾಮರಾಜ ವಾರ್ತೆ ಕೇಳಿದಾ ।
ಭೆಟ್ಟಿಗಾಗಿ ಕರಿಸಿಕೊಂಡಿದ್ದಾ ।
ರಾಜಮಂದಿರಾ ಉತ್ತರದ ಪ್ರಜೆರು ನೋಡಲುಮ್ಮೇದಾ ।
ಪರವಾನಿಗೆಯನು ಕೊಡಿಸಿದಾ ॥

ಮೇಘರಾಜಾ ಪುಷ್ಪ ಕರೆದಾ ವಾಯುರಾಜಾ ವಾಸನಾದಾ ।
ಅಗ್ನಿದೇವಾ ಶಾಂತಿಯನ್ನು ತಾಳಿಕೊಂಡಾನು ।
ಸೂರ್ಯಕಿರಣವನ್ನು ಮಂಜಿನಲ್ಲಿ ಇಳಿಸಿಬಿಟ್ಟಾನು ।
ಚಂದ್ರಶಾಂತಸ್ವರೂಪ ನೋಡಿ ಕ್ಷಯವಾದನು ।
ಹತ್ತೊಂಭತ್ತು ನೂರಾ ಆರು ಅಗಸ್ಟ ಇಪ್ಪತ್ತು ಮೂರು
ಭಾದ್ರಪದ ಶುದ್ಧ ಚೌತಿಗೆ ಐಕ್ಯವಾದನು ।
ಸ್ವರ್ಗ ಸ್ವಾಧೀನಾದ ಲಿಂಗಭೂಪ ಸಿರಸಂಗೀಶನು ॥

## ೮

ಹಿಂದು ಸಭಾ ಡ್ರೆಸ್ ಬೇರೆ ನಿಲುವಂಗಿ ಪಾಗೋಟೆ
ಶ್ವೇತ ಶೆಲ್ಲೆ ಮೈಯ ಮೇಲೆ ಹಾಕಿಕೊಳ್ಳುವರು ।
ಚರ್ಮ ಜೋಡು ಮೆಟ್ಟು ಛತ್ರಿಯನ್ನು ಹಿಡಿಸಿಕೊಳ್ಳುವರು ।

ಸಾದಾಧಡಿ ಧೋತರ ಉಟ್ಟು ಉಲ್ಪಿ ಬಡಿಗಿ ಹಿಡಿಯುವರು ।
ಜೋಡು ಎತ್ತು ಹೂಡಿದಂಥಾ ಡಮಣಿಯಲ್ಲಿ ಕೂಡ್ರುವರು ।
ಸಂಗಡಿರುವರು ಉಕ್ಕಲೀ ಭೀಮರಾಯರು ।
ಆಪ್ತಜನರೆಲ್ಲಿವರ ಮೇಲೆ ಪ್ರೀತಿ ಇದ್ದರು ॥

ರಾಜಧಾನಿ ಸಿಸ್ತ ಬೇರೆ ಶರ್ಟ ಫಾರ್ಸಿಕೋಟಗಳು
ಪಲ್ ಪಾಯ್ಮೋಜ ಹಾಕಿಕೊಂಡು ಬೂಟು ಮೆಡುವರು ।
ಪಾಟ್ಲೋನುಟ್ಟುಕೊಂಡು ಜರದ ಮಂದಿಲ ಸುತ್ತಿಕೊಳ್ಳುವರು ।
ಕಟ್ರಾ ಬಿಗಿಸಿ ಬತ್ತಲಕುದುರೆಯನ್ನು ಹತ್ತುತಿದ್ದರು ।
ವಿಕ್ಟೋರಿಯಾ ರಥ ಟಾಂಗೆಕಶ್ವಗಳನ್ನು ಹೂಡಿಕೊಂಡು ।
ವಾಸಮಾಡುತಿದ್ದರೀ ಶ್ರೀಮಂತರು ।
ಮನಸಿಗೆ ಬಂದದ್ದರ ಮೇಲ್ಕೆ ಕೂಡ್ರುವರು ॥

ಆದರ ಸತ್ಕಾರವಿತ್ತು ಅತಿಥಿ ಸನ್ಮಾನವಿತ್ತು ಆನರೇಬಲ್
ಬಹುಮಾನ ಪಡಕೊಂಡರು ।
ಸುಭೇದಾರ ಹಕ್ಕು ಎರಡನೇ ವರ್ಗ ಮ್ಯಾಜಿಸ್ಟ್ರೇಟರು ।
ಕೋರ್ಟ ನ್ಯಾಯ ಮಾಡುವವರು ಇವರು ಸಬ್‌ಜಜ್ಜರು ।
ಇಂಗ್ರೇಜಿ ಹದ್ದಿನಿಂದಾ ವಾದಿ ಪ್ರತಿವಾದಿಯರು ।
ಬೇಕಂತ ನ್ಯಾಯವನ್ನು ಹಾಕಿಕೊಳ್ಳುವರು ।
ಅನ್ಯಾಯವಾಗುವದಿಲ್ಲ ಪಾಂಡು ಪುತ್ರನೆಂದು ತಿಳಿದರು ॥

ಹತ್ತು ಹಳ್ಳಿಯೊಳಗೆ ಇರುವ ರೈತ ಜನರ ಕ್ಷೇಮವನ್ನು
ಪ್ರೀತಿಯಿಂದ ಕೇಳಿ ಸಂತೋಷಾಗುತಿದ್ದರು ।
ಅಂಗರಹಿತ ಕುರುಡ್ಕ ಕುಂಟ ಬಡ ಜನರನು ।
ಬೇರೆ ಶಾಲೆ ಕಟ್ಟಿ ಡೋಲನಿಟ್ಟು ಪಾಲಿಸಿದನು ।
ರಾಜ ಪೇಚಿನಲ್ಲಿ ಸಿಕ್ಕ ನಿರಪರಾಧಿಯನ್ನು ತಾನು ।
ಪೂಜ್ಯ ಬುದ್ಧಿಯಿಂದಾ ಹೇಳಿ ಬಿಡಿಸುತ್ತಿದ್ದನು ।
ಲಂಚ ತಿನ್ನುವಂಥ ಪಾಪಿಯನ್ನು ಪಾತ್ರಲಕ್ಕಿದನು ॥

ಬಸವರಾಜನೆಂದು ನಾನು ವಸುದಿಯಲ್ಲಿ ಸಾರುತಿದ್ದೆ
ಮಂತ್ರಿಯಲ್ಲ ಸ್ವತಃ ಈತಾ ರಾಜನಿದ್ದನು ।
ಕರ್ಣನಲ್ಲ ತಂದೆ ತಾಯಿಯಲ್ಲಿ ಜನಿಸಿದಾತನು ।

ಧರ್ಮರಾಜನೆನ್ನಲಿಕ್ಕೆ ಬಂಧು ಇಲ್ಲದಾತನು ।
ಬಳಿಚಕ್ರನಲ್ಲ ನಿವ ನಿಗರ್ವಿಯಾದಲ್ಲಿ ಕ್ಲೈವನಲ್ಲಾ ಪರದೇಶ ನೌಕರನು
ಶಿವಾಜಿಯೆಂದೆ ಇದ್ವಿದ್ದಿಲ್ಲ ವಿದ್ಯಾಹೀನನು ॥

ಪ್ರಬಲನಾದ ಬಾದಶಹ ಅಕಬರನೆನ್ನಲಿಕ್ಕೆ ಸತಿಯು
ಪರಜಾತಿಯುವಳಾಗಲಾರನು ।
ಹರಿಶ್ಚಂದ್ರನೆಂದೆ ನೀತನಿಗಿದ್ದಿದ್ದಿಲ್ಲ ಮಗನು ।
ಹೊನ್ನು ಹೆಣ್ಣು ಮಣ್ಣು ಮೂರು ತಾ ಅಳಿದಾತನು ।
ಮುವತ್ತೆರಡು ವರ್ಷತನಕಾ ಮಾಡಿ ಹೋದ ಕ್ರೀಡೆಯನ್ನು ।
ಘಳಿಗೆ ಶಾಸಿನಲ್ಲಿ ನಾನು ಹೇಳಲಾರೆನು ।
ಅಳಿದು ಬಿಟ್ಟ ಕಾಯಾ ಉಳಿಸಿದನು ಕೀರ್ತಿಯನು ॥

## ಏರು

ಸುಜನರಿಗೆ ಆಶ್ರೀತಾ ಧರೆಗೆ ತವರ ಮನೆಯಾಗಿ ।
ಉಪಕಾರ ಮಾಡಿದನು ಸಾಗಿ ।
ಭವದಲ್ಲಿ ಜನಿಸಿ ಬಂದ್ನಲ್ಲ ಸಾರ್ಥಕನಾಗಿ ।
ಮಹಾಪುರುಷ ಪ್ರಪಂಚಕ ಯೋಗಿ ।
ಲಿಂಗೇಂದ್ರನಲ್ಲ ದೇವೇಂದ್ರ ಕರುಣಕನಾಗಿ ।
ಕಣ್ಣಾರೆ ಜಗಕೆ ತೋರಿಯಡಗಿ ॥

ಸತಿ ಸುತ ಸುಖಮಾತ್ರ ಅತಿ ಮಾತ್ರ ಕಾಣಲಿಲ್ಲ
ಪಾರಮಾರ್ಥದಲ್ಲಿ ಹೊತ್ತು ಕಳೆದು ಬಿಟ್ಟಾನು ।
ಯೋಗ್ಯ ಸ್ಥಾನ ನೋಡಿ ದಾನವನ್ನು ಕೊಡುತ್ತಿದ್ದನು ।
ಭಾಗ್ಯದಾಶೆಯಿಲ್ಲ ದೂರದೃಷ್ಟಿ ಲಿಂಗಭೂಪನು ।
ಹತ್ತೊಂಬತ್ತು ನೂರಾ ಆರು ಅಗಸ್ಟ ಇಪ್ಪತ್ತು ಮೂರು
ಭಾದ್ರಪದ ಶುದ್ಧ ಚೌತಿಗೆ ಐಕ್ಯವಾದನು ।
ಸ್ವರ್ಗ ಸ್ವಾಧೀನಾದ ಲಿಂಗಭೂಪ ಸಿರಸಂಗೀಶನು ॥

೯

ಭಾಗೀರಥಿ ಬಾಯಿಯುವರು ಮಹಾಪತಿವ್ರತೆಯರು
ನಿತ್ಯ ಪುರುಷನ ಪಾದ ತೊಳೆದು ನೀರು ಕುಡಿಯುವರು ।
ಪತಿಯು ಎಂಜಲಿಲ್ಲದ ವಿನಃ ಉಗುಳು ಸಹ ನುಂಗರು ।
ಪತಿಯು ಮುಂದೆ ದೇಹವನ್ನು ತ್ಯಾಗಮಾಡಿದರು ।

ಸೀತಾ ಮಂಡೋದರಿ ಆರುಂಧತಿ ದ್ರೌಪತಿ
ಪ್ರೀತಿಯಿಂದ ಇವರಲ್ಲಿ ವಾಸ ಮಾಡಿದರು ।
ಅಹಿರಸಂಗ ತಿಮ್ಮನಗೌಡ ಇವರ ಅಗ್ರಜರು ॥

ಅವರಸಂಗ ಬಾಯಿಯವರು ದೈವದಿಂದ
ಗರ್ಭಿಣಿಯಾಗಿ ಸಿರಸಂಗಿಯು ಸ್ಥಾನಾಂತರಾಗಲೆಂದರು ।
ವಿಜಾಪುರದಲ್ಲಿ ಪ್ರಸವದ ಕಾಲ ನಿಶ್ಚಯಿಸಿದರು ।
ವಿಧಿಯು ಎತ್ತ ಹೋಗಲು ಬೆನ್ನು ಹತ್ತುವದ್ಯಾರು ಕಂಡಾರು ।
ತಿಕ್ಕೋಟಿ ಉಕ್ಕಲಿಗೌಡಾ ಇಂಗಳೇಶ್ವರ ರಾಯನಗೌಡಾ
ಇಂಡಿ ಗುರಪ್ಪನವರು ಕರೆದು ತಂದಾರು ।
ಸಕ್ತ ಅಪ್ಪನವರ ಸರ್ಬಾರೆಯನ್ನು ಸ್ವಂತ ಮಾಡಿದರು ॥

ಐಶ್ವರ್ಯೇನು ಹೇಳುವದು ಈಶ್ವರಿತ್ತ ಧನಿಕತನಾ
ಅಶ್ವವಾಹನೀಗಳೆಲ್ಲಾ ಸಂಗಡಿದ್ದರು ।
ದಾಸೀ ದಾಸರೇಸು ಮಂಡಿ ಪಾಕ ಸಾಧನೀಕರು ।
ಶಹಾಪೂರ ಪೇಟೆಯಲ್ಲಿ ಮನೆಯ ಬಾಡಗಿ ಹಿಡಿದರು ।
ನೂರಾರು ಜನಕ್ಕಿಂತ ಹೆಚ್ಚಿತ್ತು ಸರಬರಾಯ
ವಿಜಾಪುರದಲ್ಲಿ ಭರದಿವಾಸ ಮಾಡಿದರು ।
ಸರ್ವಜನರಿಗೆಲ್ಲ ಗೊತ್ತಿದ್ದದ್ದು ಯಾರು ಅರಿದವರು ॥

ಅಪ್ಪಾಸಾಹೇಬ ದೊರೆಗಳವರು ಎಪ್ಪತ್ತು ಸಾವಿರ
ನೋಟ ತಪ್ಪದಿಂದ ತೆಗೆದುಕೊಂಡು ಸ್ವಂತ ಬಂದಾರು ।
ಪುತ್ರೋತ್ಸವಕ್ಕೆ ಖರ್ಚಿಗವರು ಸಿದ್ಧವಾದರು ।
ದಾಸೋಗಿಟ್ಟಂತೆ ವನದಲ್ಲಿ ಧರ್ಮರಾಯರು ।
ಕರ್ಪುರಂಥ ದೊರೆಯು ಮುಖ ಕಪ್ಪಾಗು ಕಾಲಕ್ಕೆ
ಎದ್ದು ಬಂದಲ್ಲದ್ದು ಬಡಿದು ಖಿನ್ನವಾದರು ।
ಸತಿಯ ಚಿಂತೆಯಿಂದ ಭ್ರಾಂತರಾಗಿ ಆಶೆನಳಿದರು ॥

ಭಾಗೀರಥಿಭಾಯಿಯರಿಗೆ ಆಗಿತ್ತೆಂಟು ತಿಂಗಳ ಗರ್ಭಿ
ಶನಿ ಹನ್ನೊಂದು ಸ್ಥಾನಕ್ಕೈದನು ।
ಆಗ ನೇತ್ರ ಧೂತರನ್ನು ಕಳಿಸಿ ಕರಿದು ವೈದನು ।
ಭೋಗ ಏನ ಹೇಳಲಯ್ಯೋ ಬ್ರಹ್ಮ ಹಾಗೆ ಬರೆದಾನು ।
ಹುಟ್ಟಿದಾರಭ್ಯದಿಂದ ಕಟ್ಟಕಡೆಯಾಗುತನಕಾ

ಕಷ್ಟದಲ್ಲಿ ಕಾಲಕಳೆದು ಖ್ಯಾತಿ ಹೊಂದಿದನು ।
ಸೌಖ್ಯವಿದ್ದರೆಷ್ಟು ಕೀರ್ತಿ ಫಳಿಸುವಾ ಹೇಳಲಾರೆನು ॥

ವೀರಶೈವ ಸಂಘಕ್ಕೆಲ್ಲ ಹಣದ ಗುಂಪು
ಕೊಡಲಿಕ್ಕೆ ವ್ಯಾಪಾರ ಮಾರ್ಗವೆಂದು ತಿಳಿದಿದ್ದರು ।
ಬಹು ಜನರೆಲ್ಲಾ ಆಗಲೆಂದಾ ಶೇರದಾರರು ।
ಈ ಸಂಪರ್ಕದಿಂದ ಪ್ರೀತಿ ಹೆಚ್ಚಲೆಂದಾರು ।
ದೊಡ್ಡ ದೊಡ್ಡ ಗ್ರಾಮಕ್ಕೊಂದು ಅಂಗಡಿಯ ಸ್ಥಾಪಿಸಿ
ದೊಡ್ಡದೊಂದು ಕಂಪನಿ ಕಲ್ಪಿಸಿದರು ।
ಸದಾಕಾಲದಲ್ಲಿ ಚಿಂತಿಸುತ್ತ ಕುಳಿತಿದ್ದರು ॥

ಕಲ್ಪಿಸಿದ ಹೇತುವನ್ನು ಸ್ವಲ್ಪಕಾಲದಲ್ಲಿ ತಾನು
ಬಲ್ಲಜನರ ಕೂಡಿಕೊಂಡು ಸ್ಥಾಪಿಸಿದನು ।
ಜಿನಕನಕೊಪ್ಪ ಬಾಪುಗೌಡ ಹೊಂಗಲ ಹವಾಲದಾರನು ।
ಶೀಗುಣಿಸಿ ಭೀಮನಗೌಡ ತಾಳಿಕೋಟಿ ಗುರಪ್ಪಣ್ಣಾ
ಏಳು ಮಂದಿ ತುರ್ತ ಶೇರ ಹಾಕಿಸಿಟ್ಟಾನು ।
ವಿಜಾಪುರದ ಅಂಗಡಿ ಪ್ರಥಮದಲ್ಲಿ ಸುರುವು ಮಾಡಿದನು ॥

## ಏರು

ವಿಜಾಪುರದಲ್ಲಿ ಏಳೂರ ಗೌಡರ ಅಂಗಡಿ ।
ಇಟ್ಟಾನ ಇವರನ್ನೆಲ್ಲ ಕೂಡಿ ।
ಕಂಪನಿ ತೆಗೆದ ಮಹಾಜ್ಞಾನಿ ಪಾಯಾಹಾಕಿ ನೋಡಿ ।
ಬರಲಿಲ್ಲ ಮಾತು ಕೈಗೂಡಿ ।
ಅಷ್ಟರೊಳಗೆ ಆಯ್ತು ನೋಡು ಬೆಳಗ ಶಿವನ ಪಾದ ಕೂಡಿ ।
ಕಂಪನಿ ಆಯ್ತು ಅಡತಿ ಅಂಗಡಿ ॥

ತುರ್ತುಕಡಿಮೆ ಬಿದ್ದರಕಮು ಭರ್ತಿ ಮಾಡತೀನಿ ಅಂತಾ
ಶರ್ತಿನಿಂದ ಸುರುವಾತ ಮಾಡಿದ್ದನು ।
ಸಿದ್ಧಿಗ್ಹೋಗಲಿಲ್ಲ ನಟ್ಟು ನಡುವೆ ಕೈಬಿಟ್ಟನು ।
ಹತ್ತೊಂಬತ್ತು ನೂರಾ ಆರು ಅಗಷ್ಟ ಇಪ್ಪತ್ತು ಮೂರು
ಭಾದ್ರಪದ ಶುದ್ಧ ಚೌತಿಗೆ ಐಕ್ಯವಾದನು ।
ಸ್ವರ್ಗ ಸ್ವಾಧೀನಾದ ಲಿಂಗಭೂಪ ಸಿರಸಂಗೀಶನು ॥

೧೦

ಬೆಳ್ಳೇರಿ ವಸೂಲಿಗಾಗಿ ಏಳು ದಿವಸ ಹೋಗಿ ನಿಂತ
ಕಾಳಬಂದು ಒದಗಿತಯ್ಯಾ ಊಟದಲ್ಲಿ ।
ಅನ್ನ ಜೀರ್ಣವಾಗಲಿಲ್ಲ ಹೊಟ್ಟೆಯುಬ್ಬತಲಿ ।
ಕೈಕಾಲು ತಲೆಶೂಲಿ ಹಾಕಿ ಮಲಗುತಲಿ ।
ನಳಿನಳಿ ಅಂತಾ ತಿರುಗಿ ಬಳಲುತ ಬಂದಾರು
ತಿಂಗತಿಂಗಳಲ್ಲಿ ಬೇನೆ ಹೆಚ್ಚುತಲಿ ।
ಕ್ಷಯರೋಗವಾಗಿ ಮಾಯ ಬಲಿ ಒದಗುತಲಿ ॥

ದೇಶಿವೈದ್ಯರಿಂದ ಬೇನೆ ವಾಸಿಯಾಗಲಿಲ್ಲಾ
ಗೋವೆಯ ಡಾಕ್ಟರರಿಂದಾ ಕಷಾಯ ತೆಗೆದುಕೊಂಡಾರು ।
ಮಿರ್ಜಿ ಜಮಖಂಡಿ ವೈದ್ಯರು ನಿಲುವ ನಿಂತರು ।
ನಿತ್ಯ ನಿತ್ಯ ಬೇನೆ ಹೆಚ್ಚಿ ಕೃಶವಾದರು ।
ಆಕ್ಟೋಬರ ತಿಂಗಳಿಂದಾ ಅಗಸ್ಟ ತಿಂಗಳತನಕಾ
ಹದಿನೈದು ತಿಂಗಳ ಬೇನೆ ತಾಳಿಕೊಂಡರು ।
ವಾಂತಿ ಶೌಚಾದಿ ಕ್ಷೀಣವಾಗಿ ಧೈರ್ಯಗುಂದಿದರು ॥

ಬೇನೆಯ ಸ್ವರೂಪವನ್ನು ತಿಳಿದುಕೊಂಡು
ಅಂತ್ಯಕಾಲ ಒದಗಿತೆಂದು ಮರಣ ಪತ್ರ ಬರೆದು ಇಟ್ಟಾರು ।
ಸಾವು ಎರಡು ತಿಂಗಳಿರತ ಬರಹ ಸುರುವು ಮಾಡಿದರು ।
ಮೃತ್ಯು ಪತ್ರ ಬರೆದು ಪೆಟ್ಟಿಗೆಯಲ್ಲಿ ಮುದ್ರೆ ಹಾಕಿದರು ।
ಬೆಳಗಾಂವಿ ಅಧಿಕಾರಿಯಾದ ಕಲೆಕ್ಟರರ ಸ್ವಾಧೀನಕ್ಕೆ
ಸ್ವತಃ ಹೋಗಿ ಪೆಟ್ಟಗೆ ಕೊಟ್ಟು ಬಂದಾರು ।
ಸ್ಥಾನಾಂತರ ಆಗಲಿಕ್ಕೆ ಬೆಳಗಾಂವಿ ಬಿಟ್ಟರು ॥

ನವಲಗುಂದದಲ್ಲಿ ಹೋಗಿ ಒಂದು ತಿಂಗಳಿದ್ದರಯ್ಯಾ
ಕೆರಿಗಾಗಿ ರೈತರ ಭೂಮಿ ತಕ್ಕೊಂಡಿದ್ದರು ।
ಅಲ್ಲಿ ಕರಿಸಿ ಇಚ್ಛಾ ಜಮೀನವನ್ನು ಕೊಟ್ಟು ಬಿಟ್ಟರು ।
ಪುರವಣಿ ಉಯಿಲ್ ಒಂದು ಬರೆದು ಮೃತ್ಯು ಪತ್ರ ಮುಗಿಸಿದರು ।
ರಾವಸಾಹೇಬ ದೇವಣಾರ್ಯ ನವಲಗುಂದ ಸುಭೇದಾರ
ಅಂತಕಾಲದಲ್ಲಿ ಅವರ ಹತ್ತರಿದ್ದರು ।
ಟ್ರೇಝುರಿ ಕೀಲಿಯನ್ನು ಅವರ ಸ್ವಾಧೀನಕ್ಕೆ ಕೊಟ್ಟರು ॥

ಮರಣ ಕಾಲದಲ್ಲಿ ತಾನು ಕರಿಸಿಕೊಂಡನು
ಪ್ರಿಯಮಿತ್ರ ರಾವಬಹಾದ್ದೂರ ಅರಟಾಳ ಸಾಹೇಬರನ್ನು ।
ನವಲಗುಂದ ಸುಭೇದಾರ ಸಿದ್ದಪ್ಪಣ್ಣನನ್ನು ।
ರಾಯನಗೌಡ ಪಾಟೀಲ ಇಂಗಳೇಶ್ವರ ಹತ್ತರಿದ್ದಾನು ।
ಚೌತಿ ಗುರುವಾರ ದಿವಸ ಐದುಗಳಗಿ ಹೊತ್ತು
ಏರಿ ಸ್ವರ್ಗ ಸೋಪಾನ ಕಣ್ಣು ತೆರೆದು ನೋಡಿದನು ।
ಹರನ ಸ್ಮರಣೆಯಿಂದಾ ಮೇಲಕ್ಕೇರಿ ಮಾಯವಾದನು ॥

ತಾರಿನಿಂದ ಮರಣವಾರ್ತೆ ಸಂಸ್ಥಾನಕ್ಕೆಲ್ಲಾ ತಿಳಿಸಿ
ದಿಕ್ಕದಿಗಂತಕೆಲ್ಲಾ ಹರಿಸಿಬಿಟ್ಟರು ।
ಪಾಹರೆ ಮಾಂಡಲಿಕ ರಾಜರೆಲ್ಲಾ ಬಂದು ಮಾಡಿದರು ।
ಮುಂಬಯಿ ಕನ್ಯಾ ಕುಮಾರಿ ಜನರು ಹೌಹಾರಿದರು ।
ವ್ಯಾಪಾರ ಕಚೇರಿಯಲ್ಲಾ ಬಂದ ಮಾಡಿ ದುಃಖದಲ್ಲಿ
ಸರ್ವ ಜನಾಂಗ ಮುಳುಮುಳುಗಿ ಎದ್ದಾರು ।
ದೇವರನ್ಯಾಯ ಮಾಡಿದ್ದಕ್ಕೆ ಯಾರೇನು ಮಾಡ್ಯಾರು ॥

## ಏರು

ನವಲಗುಂದ ಸುಭೇದಾರ ಬಂದು ಪ್ರೇತಯೆರಿಸಿದಾ ।
ಪೂರ್ವಜರ ಕೂಡ ಕಲಿಸಿದಾ ।
ದಾನ ಧರ್ಮ ಜಾತಿಯ ಕರ್ಮ ಪ್ರಕಾರ ಮಾಡಿದಾ ।
ದ್ವಿಸಹಸ್ರ ಖರ್ಚಿಗಿಟ್ಟಿದ್ದಾ ।
ಸಾಯುವ ಮುಂದ ಅಳುವದು ಬಂದ ಮಾಡಿ ತಾ ಹೋದಾ ।
ಶಿವನಾಮ ಸ್ಮರಿಸಿ ದೇಹ ಒಗೆದಾ ॥

ಶರಣನಾದ ಲಿಂಗದೊರೆಯು ಮರಣ ಪತ್ರದಲ್ಲಿ
ತನ್ನ ಜನ್ಮ ಗೃಹದಲ್ಲೊಬ್ಬನನ್ನು ದತ್ತಕ ಮಗನು ।
ಮಾಡಿಕೊಂಡನೆಂಬ ಸಂಶಯ ಸೇರಿ ಸರ್ವರನ್ನು ।
ಅಂತ ತಿಳಿಯಲಾರದಾತ ಲೇಖಿ ಬರೆದು ಇಟ್ಟಾನು ।
ಹತ್ತೊಂಭತ್ತು ನೂರಾ ಆರು ಅಗಸ್ಟ ಇಪ್ಪತ್ತು ಮೂರು
ಭಾದ್ರಪದ ಶುದ್ಧ ಚೌತಿಗೆ ಐಕ್ಯವಾದನು ।
ಸ್ವರ್ಗ ಸ್ವಾಧೀನಾದ ಲಿಂಗಭೂಪ ಸಿರಸಂಗೀಶನು ॥

೧೧

ದೇಹ ಸ್ಥಾಪನೆಯಾದ ಮೇಲೆ ಮೃತ್ಯು ಪತ್ರ ಮುದ್ರಿಸುವದಕೆ
ಹಿತದ ಜನರು ಜಿಲ್ಹೆಯಲ್ಲಿ ಹೋಗಿ ನಿಂತರು ।
ಉಯಿಲ್ ಮಹಿಮ ತಿಳಿದುಕೊಳ್ಳಲಿಕ್ಕೆ ಹಂಗು ದೊರಿದರು ।
ರಾವಬಹದ್ದೂರವರು ಅರ್ಜಿಕೊಟ್ಟು ಪೆಟ್ಟಿಗೆ ತೆಗಿಸಿದರು ।
ಮೆಹರ್ಬಾನ ಕಲೆಕ್ಟರವರು ಮೊಹರು ಒಡೆದು ನೋಡಿದರು ।
ಮಹಾರಾಷ್ಟ್ರ ಭಾಷೆಯಲ್ಲಿ ಬರೆದಿದ್ದರು
ದೇವ ಬರಹವನ್ನು ರಜಿಸ್ಟರ ಮಾಡಿಸಿದರು ॥

ಹಿಂದಕ್ಕೆ ದ್ವಾಪಾರದಲ್ಲಿ ಗಾಂಧಾರಿ ಗರ್ಭದೊಳಗೊಂದು
ಕುಂಭದಲ್ಲಿ ನೂರಾವೊಂದು ಮಕ್ಕಳಿದ್ದರು ।
ಬ್ರಹ್ಮನಂದನ ನಾರದ ಸ್ತ್ರೀರೂಪವಾದನು ।
ಕೃಷ್ಣನಿಂದಾ ಆಗಿ ಅರವತ್ತು ಸಂವತ್ಸರು ।
ಎಂದು ನಾವು ಕಥೆಯನ್ನು ಇಂದಿನವರೆಗೆ ಕೇಳುವೆವು ।
ಪ್ರತ್ಯಕ್ಷವಾಗಿ ಕಂಡಿಲ್ಲಾ ಯ್ಯಾರ್ಯಾರು ।
ಇದು ಒಂದೇ ನೋಡಿದೆವು ಎಂಥಾ ಮಹಾತ್ಮರು ॥

ಶ್ರೇಷ್ಠನಾದ ಲಿಂಗಭೂಪನ ಹೊಟ್ಟೆಯೊಳಗಿನ ಕುವರರನ್ನು
ಹಸ್ತದಿಂದಾ ತೆಗೆದು ದಸ್ತಿನಲ್ಲಿ ಇಟ್ಟರು ।
ಜಿಲ್ಲಾ ಅಧ್ಯಕ್ಷ ಒಡೆದು ನೋಡಿ ಘಾಬರ್ಯಾದರು ।
ಮುವತ್ತೈದು ಲಕ್ಷ ಕುವರರನ್ನು ಹೆತ್ತಿದ್ದರು ।
ಇಷ್ಟೇ ಅಲ್ಲ ಲಿಂಗಿಗಳು ಸೃಷ್ಟಿಯೊಳಗೆ ಹುಟ್ಟುವವರು ।
ಭಂಟ ರಾಜಗ ಆಗುವವರು ನಂದನರು ।
ಇಂಥಾ ಲೇಖವನ್ನು ಬರೆದಿದ್ದಿಲ್ಲ ಹಿಂದೆ ಯಾರ್ಯಾರು ॥

ದಕ್ಷವಾದ ಮಾತು ಈಗ ಪಕ್ಷವಿಲ್ಲದೆ ಹೇಳುವೆನು
ಲಕ್ಷಕೊಟ್ಟು ಕೇಳಿರೀ ಸಭೀಕರು ।
ಲಕ್ಷಕ ಲಕ್ಷ ಕೊಟ್ಟರೂ ಸಿಗರಿಂಥಾ ಮಹನೀಯರು ।
ವೈಭವ ಭಿಕ್ಷಾ ಕೊಟ್ಟಿದ್ದನ್ನು ಯಾರು ಕೇಳಿರುವರು ।
ಸಾಕ್ಷಾತ ಪರಶಿವನು ಅರ್ಧಾಲಕ್ಷ ಉತ್ಪನ್ನ ಭೂಮಿ
ಪಕ್ಷವಿಲ್ಲದೆ ತಾವು ಭಿಕ್ಷಾ ಕೊಟ್ಟರು ।
ವಿದ್ಯಾ ಲಕ್ಷಕೊಟ್ಟು ಕಲಿತು ಹೇಳಿರಾತನ ಹೆಸರು ॥

ಮೃತ್ಯು ಪತ್ರ ಮಹಿಮೆಯನ್ನು ಸತ್ಯ ನಾನು ಹೇಳುವೆನು
ಪಂಚರೇಳು ಜನರನ್ನು ನೇಮಿಸಿದರು ।
ರಾವ ಬಹದ್ದೂರರಟಾಳ ದೊರಿ ಹಿರಿಯವರು ।
ರಾವಸಾಹೇಬ ರೇವಣಾರ್ಯ, ಘಾಳಿಯವರು ।
ಬೀ. ಪ. ರೇಣಾಪುರ ಮತ್ತು ತಿಕ್ಕೋಟಿಯ ತಿಮ್ಮನಗೌಡರು
ಇಂಗಳೇಶ್ವರ ರಾಯನಗೌಡ ಅಣ್ಣನವರು ।
ಅತಿ ಸಂಭಾವಿತ ಉಕ್ಕಲಿಯ ಭೀಮರಾಯರು ॥

ಬುದ್ಧಿವಂತರೇಳು ಜನರು ಮುದ್ದಿಯಾಗಿ ವಿಚಾರಿಸಿ
ಅಧ್ಯಕ್ಷ ಬೆಳಗಾಂವಿ ಜಿಲ್ಹೆ ಕಲೆಕ್ಟರರು ।
ಸಿದ್ಧ ಮಾಡಿದಂಥ ಮಾತಿಗಿವರು ತುತ್ತ ಕೊಡುವವರು ।
ಕಾರಭಾರಿಯನ್ನು ಪಂಚರಿಂದ ನೇಮಿಸುವರು ।
ನೌಕರ ಚಾಕರ ಖರ್ಚು ಹಕ್ಕು ಬಾಬು ಹೋಗಲಾಗಿ
ಶಿಲ್ಕು ಉಳಿದ ದುಡ್ಡನ್ನೆಲ್ಲ ಕೂಡಿ ಇಡುವರು ।
ವರ್ಷ ಅಂತ್ಯದಲ್ಲಿ ಲಿಂಗಾಯತ ಫಂಡಿಗೆ ಕೊಡುವರು ॥

## ಏರು

ತನ್ನ ಬಂಧು ಬಳದವರಿಗೊಂದು ಕೊಟ್ಟ ಅರಲಕ್ಷ ।
ಉಳಿದದ್ದು ಎಲ್ಲಾ ನೀಡಿ ಭಿಕ್ಷಾ ।
ಮನದಲ್ಲಿ ಇದ್ದ ಮಾತು ಕೈಲೆ ಬರೆದ ನವದಕ್ಷಾ ।
ವಿದ್ಯೆ ಹೆಚ್ಚಲೆಂಬ ಅಪೇಕ್ಷಾ ।
ಕಲ್ಯಾಣ ಕಲಿತ ಪಾಷಾಣದಂತೆ ಇವರ ಕುಕ್ಷ ।
ಶಿವನಿಂದ ತಾ ಪಡೆದ ತಾ ಮೋಕ್ಷ ॥

ಶ್ರೀಮಂತ ಸತಿಯಳಾದ ಸುಂದ್ರಾಬಾಯಿ ಸಾಹೇಬರಿಗೆ
ಮಹಿನಾ ನೂರು ರೂಪಾಯಿ ಪೋಟಗಿಟ್ಟಾನು ।
ಸಂಸ್ಥಾನದಿಂದ ನೇಮಿಸಿದ ರಕ್ಷಕರನ್ನು ।
ಯಾತ್ರೆ ಖರ್ಚಿಗಾಗಿ ಹಣವನು ಮಂಜೂರಿಟ್ಟನು ।
ಹತ್ತೊಂಭತ್ತು ನೂರಾ ಆರು ಅಗಸ್ಟ ಇಪ್ಪತ್ತುಮೂರು
ಭಾದ್ರಪದ ಶುದ್ಧ ಚೌತಿಗೆ ಐಕ್ಯವಾದನು ।
ಸ್ವರ್ಗ ಸ್ವಾಧೀನನಾದ ಲಿಂಗಭೂಪ ಸಿರಸಂಗೀಶನು ॥

೧೨

ದೇಶಗತ ಮನೆತನದ ವಂಶದವನು ಅಲ್ಲಿ ನಾನು
ಬೇಸಾಯು ನಂದನನು ದತ್ತಕಾದೇನು ।
ಖಾಸ ಹೊಟ್ಟೀ ಮಕ್ಕಳಿಲ್ಲ ಒಂದೇ ಕುಟುಂಬ ನಾನು
ದೇಶ ರೂಢಿಯಂತೆ ದತ್ತಕ ಮಗನ ಆಸೆ ಬಿಟ್ಟೆನು ।
ಹಿಂದೆ ಉಳಿದ ಕುಟುಂಬಕ್ಕೆ ನಂದನರ ಕೊಳ್ಳಲಿಕ್ಕೆ
ಬಂದ ಮಾಡಿ ಅಧಿಕಾರ ತೆಗೆದು ಹಾಕಿದೆನು ।
ಸಾಯುುವ ಮುುಂದ ಹೇಳಿದನೆಂದು ನೊಂದಕೊಂಡರೆ ಸುಳ್ಳದೇನು ॥

ಒಂಭತ್ತು ತಿಂಗಳದೊಳಗೆ ಶಂಭುವಿನ ದಯದಿ
ಕುಟುಂಬದಲ್ಲಿ ಗಂಡು ಮಗು ಎನಗೆ ಜನಿಸಿದಲ್ಲಿ ।
ಐದು ವರ್ಷ ತನಕಾ ಕುಟುಂಬ ತಾಬೇದಲ್ಲಿ
ನಂತರಧ್ಯಕ್ಷ ಕೊಳ್ಳಿ ತನ್ನ ಸ್ವಾಧೀನದಲ್ಲಿ ।
ಬುದ್ಧಿವಂತ ಕೊಂಕಣೀಯ ಬ್ರಾಹ್ಮಣನ
ಶಿಕ್ಷಣೀಯ ಕನ್ನಡ ಮರಾಠಿ ಕಲಿಯುತಲಿ ।
ತೀರ್ಗಡೆಯಾಗುತನಕಾ ಇಂಗ್ಲೀಷ ವಿದ್ಯೆಯಲ್ಲಿ ॥

ಹಿಂದುಸ್ತಾನದಲ್ಲಿ ಬೇಕಾದ್ದೊಂದು ಭಾಗದಲ್ಲಿ ।
ಇಟ್ಟು ಕಂದನಿಗೆ ಕೊಡಲೆಂದು ಶಿಕ್ಷಣೆಯನ್ನು
ಧರ್ಮರೀತಿಯಂತೆ ಅನ್ನೋದಕ ವ್ಯವಸ್ಥೆಯನ್ನು ।
ಜಿಲ್ಹಾಧೀಶ ಮಾಡಲೀ ಅಪೇಕ್ಷೆಯನ್ನು ।
ದೇಶಾಂತರಕ್ಕೆ ವಿದ್ಯಾಭ್ಯಾಸಗೋಸ್ಕರವಾಗಿ
ಏಸು ಕಾಲದಿ ಕಳಿಸಬಾರದೆಂದೆನು ।
ಸುಜ್ಞಾನೆಂದಮೇಲೆ ಮದುವೆಯನ್ನು ಮಾಡಲೆಂದನು ॥

ಹಿಂದಿನ ಶರೀರ ಸಂಬಂಧಿಗಳಿಂಗಳೇಶ್ವರ
ತಿಕ್ಕೋಟೆ ಉಕ್ಕಲಿ ಗ್ರಾಮೀಣೀಯರನ್ನು ।
ಕೇಳಿ ಕಂದನಿಗೆ ತೆಗೆಯುುವದು ಕನ್ಯೆಯನ್ನು
ಅವರ ಮರ್ಜಿಯಂತೆ ಮಾಡಿರೆಂದೆ ಲಗ್ನವನ್ನು ।
ಸಜ್ಞಾನ ಮೇಲೆ ಮೇಲೆ ಸಂಸ್ಥಾನನಾಳುವಂಥ
ಸುಜ್ಞಾನಾದರೆ ತಾಬೆ ಕೊಡಲೆಂದನು ।
ಲಿಂಗವಂತ ಫಂಡಿಗಾಗಿ ಕೊಟ್ಟು ಶಿಲ್ಕು ಹಣವನ್ನು ॥

ಪುತ್ರಿಯಳು ಹುಟ್ಟಲು ಅವಳ ಆಪ್ತರ ಸಮ್ಮತಿಯಂತೆ
ಜ್ಯಾತಿಯಲ್ಲಿ ವಿದ್ಯಾವಂತ ವರವನ್ನು।
ನೋಡಿ ಐದು ಸಾವಿರುತ್ಪನ್ನ ವೃತ್ತಿಯನ್ನು।
ನೀಡಿ ಲಗ್ನಮಾಡಿ ಕೊಡಿರೆಂದು ಅವಳನ್ನು।
ತನುಜೆಯಳ ಉದರದಲ್ಲಿ ಜನಿಸಿದಂಥ ಕುವರನನ್ನು
ದೇಶಗತಕೊಡೆಯನನ್ನು ಮಾಡಿದರೆಂದೆನು।
ಸಜ್ಞಾನಾಗುತನಕಾ ಶಿಲ್ಕು ಹಣ ಫಂಡಿಗಿಟ್ಟೇನು॥

## ಏರು

ಕುವರೀ ಕುವರ ಕೂಡಿ ಜನಿಸಿದರ ಕುವರ ಮಾಲಕನು।
ಮಗಳಿಗೆ ಕೊಟ್ಟ ವೃತ್ತಿಯನು।
ಆ ಪುತ್ರನಾಗಲು ಪುತ್ರ ದತ್ತ ದತ್ತಕ ಮಗಳ ಮಗನು।
ಸಂಸ್ಥಾನಕ್ಕೆ ಒಡೆಯನು।
ಮಗಳ ವಂಶ ಆದರೆ ನಷ್ಟಾಂಶ ಮಗನು ಮಾಲಕನು।
ಹೀಗಿರುವದಯ್ಯ ಸ್ವಮನು॥

ಸಂಸ್ಥಾನದಲ್ಲಿ ನಿಶ್ಚಿಂತರಾಗಿ ಉಣ್ಣುವಂಥ ಪೋಟ
ಇನಾಮುದಾರರನೇಕರನ್ನು।
ಅವರ ಸನದ ನೋಡಿ ನಡಿಸಲೆಂದೆ ವತನಿಯನು।
ಹೆಚ್ಚಾಗಿರುವಂಥಾ ಸಾಮಾನೆಲ್ಲಾ ಮಾರಲೆಂದನು।
ಹತ್ತೊಂಭತ್ತು ನೂರಾ ಆರು ಅಗಸ್ಟ ಇಪ್ಪತ್ತು ಮೂರು
ಭಾದ್ರಪದ ಶುದ್ಧ ಚೌತಿಗೆ ಐಕ್ಯವಾದನು।
ಸ್ವರ್ಗ ಸ್ವಾಧೀನನಾದ ಲಿಂಗಭೂಪ ಸಿರಸಂಗೀಶನು॥

೧೩

ಸಿರಸಂಗಿ ಸವದತ್ತಿ ಮತ್ತು ನವಲಗುಂದ ವಾಡೆಗಳನು
ದುರಸ್ತ ಇಟ್ಟು ಉಳಿದ ಜಾಗಾ ಮಾರಲೆಂದನು।
ಬೆಳಗಾಂವಿ ಬಂಗಲೆಕ್ಕ ಇಟ್ಟು ಒಂದು ಆಳನ್ನು।
ತಿಂಗಳಾ ಹನ್ನೆರಡು ರೂಪಾಯಿ ಕೊಟ್ಟು ಪಗಾರವನ್ನು।
ಕನ್ನೂಲ ಮಾಧುಬಾಯೆನಗೆ ಖರ್ಚಿಗಾಗಿ ಕೊಟ್ಟ
ಹಣವು ಜಿನ್ ಜಿಖೇರಿಯಿಂದ ಮುಟ್ಟಿಸೆಂದೆನು।
ಅವನಿಗೆ ಎರಡು ಸಾವಿರ ರೂಪಾಯಿ ಬಕ್ಷೀಸವನ್ನು॥

ಸೋದರಳಿಯನಾದ ಅಂಣಾ ಬಸವಂತ ಇವರಿಗೆ
ಮೊದಲಿನಿಂದ ವಿದ್ಯೆಯನ್ನು ನಾನು ಕಲಿಸಿಹೆನು ।
ಅವರು ಬಿ. ಎ. ಆಗುವತನಕಾ ಕೊಟ್ಟು ಆದ ಖರ್ಚನ್ನು ।
ಅವರ ಲಗ್ನಕ್ಕೆ ನಾಲ್ಕು ಸಾವಿರ ರೂಪಾಯಿಯನ್ನು ।
ಬ್ರಾಹ್ಮಣ ಕಾರಕೂನರನ್ನು ಕಡಿಮೆ ಮಾಡಿ
ಪಂಚರಿಂದಾ ನೂರು ರೂಪಾಯಿಯ ಕಾರಬಾರಿಯನ್ನು
ನೇಮಿಸಿದ್ದಂತೆ ನಡಿಸಲೆಂದೆ ಸಂಸ್ಥಾನ ॥

ತಿಕೋಟಿ ಗಂಗವ್ವಮ್ಮಾ ಅನೇಕ ವರ್ಷ ನನ್ನಲ್ಲಿದ್ದು
ಬೇನೆಯಲ್ಲಿ ಸಕ್ತ ಸಂರಕ್ಷಣೆಯನ್ನು ।
ಮಾಡಿದರಾದ ಕಾರಣವರಿಗೆ ಸ್ತ್ರೀಧನವನ್ನು ।
ಮೊದಲು ಕೊಟ್ಟ ಬಂಗಾರವವರಿಗೆ ಬಿಟ್ಟು ಬಿಟ್ಟೆನು ।
ಜೀವಂತ ಇರುವತನಕಾ ತಿಂಗಳ ಎಂಟು ರೂಪಾಯಿ
ಇದ್ದಲ್ಲಿ ಮುಟ್ಟಸೆಂದು ಬರೆದಿಹೆನು ।
ಬಸಮ್ಮನಿಗೆ ತಾಹಾತಾರು ರೂಪಾಯಿಯನ್ನು ॥

ಸಿಗ್ಲಿ ಮುದಿಯಪ್ಪನಿಗೆ ಸಾಲಪಟ್ಟಿ ಕಮತವುನಿ
ನಾಲ್ಕು ಎತ್ತು ಸಾಮಾನು ಕೊಟ್ಟಿರುವೆನು ।
ಇಲ್ಲಿ ಬಿನ್ ಪಗಾರದಿಂದ ಕಮುತಾಮಾಡಿಸಿರುವನು ।
ಕರಿಬಸವ ತನುಜಾ ಸಿಗ್ಲಿ ಮಲ್ಲಪ್ಪಗಿನ್ನು ।
ಹುಟ್ಟನಿಂದಾ ರಕ್ಷಿಸೇನಿ ಕೊಟ್ಟು ಬಿಟ್ಟೆ ವಿಜಾಪುರ
ಇಟ್ಟ ಅಂಗಡಿಯ ಪಾಲವಿದ್ದದ್ದನ್ನು ।
ಇವನ ತಂದೆಗಿತ್ತೆ ಐದು ಸಾವಿರ ರೂಪಾಯಿಯನ್ನು ॥

## ಏರು

ಹೊಟ್ಟೆಯ ಮಗನು ಹುಟ್ಟದಿದ್ದರಿದನು ಕೊಟ್ಟೆ ದಾನವನು ।
ಪಂಚರಿಂದ ಸಾಗಿ ಸಂಸ್ಥಾನು ।
ಹೀಗೆ ಬರೆದು ತಿಳಿದನವರಿದು ಲಿಂಗಭೂಪನು ।
ತಲೆ ಶುದ್ಧವಿತ್ತು ಕೇಳಿನ್ನು ಜಗದಲ್ಲಿ
ದಾನಕೊಡುವಲ್ಲಿ ಸಿಗನು ಇಂಥವನು ।
ಪಾಲಿಸಿದ ಹತ್ತು ಪುರವನ್ನು ॥

ಅಂಬೆಯು ತೊಡೆಯು ತಲೆಗಿಂಬು ಮಾಡಿಕೊಂಡ ದೇವಾ
ಅಂಬುಜಾಕ್ಷ ನೀಯಲೆಂದೆ ಮೋಕ್ಷವನು ।
ಸಾಂಬ ರಹಿತ ಮಾಡಲೆಂದೆ ಜರಾಮರಣವನು ।
ಹತ್ತೊಂಭತ್ತು ನೂರಾ ಆರು ಅಗಷ್ಟ ಇಪ್ಪತ್ತು ಮೂರು
ಭಾದ್ರಪದ ಶುದ್ಧ ಚೌತಿಗೆ ಐಕ್ಯವಾದನು ।
ಸ್ವರ್ಗ ಸ್ವಾಧೀನಾದ ಲಿಂಗಭೂಪ ಸಿರಸಂಗೀಶನು ॥

೧೪

ಭವಿಷ್ಯತ್ತು ಜೋತಿಷ್ಯ ಮತ್ತು ಸಾಮುದ್ರಿಕಾದಿಗಳೆಲ್ಲಾ
ಸಹವಿದ್ಯೆ ಸಕಲ ಗುಣ ಸಂಪನ್ನನು ।
ವೇದಶ್ರುತಿ ಆಗಮಾದಿಗಳ ಪಾರಾಯಣನು ।
ಗಾನ ವಿದ್ಯೆಯಲಿ ಸಂಪೂರ್ಣ ಬಲ್ಲಿದನು ।
ತೆಲಗು ತಮಿಳ ಅರವು ಆಂಗ್ಲ ಕನ್ನಡ ಹಿಂದು
ಸಂಸ್ಕೃತ ಬಲ್ಲವ ಭಾಷೆಯನು ।
ಮಹಾರಾಷ್ಟ್ರ ವಿದ್ಯೆಯಲಿ ಪ್ರವೀಣನು ॥

ತ್ರಿಕಾಲ ಶಿವಪೂಜೆ ನಕುಲ ಸಹದೇವ ವಿದ್ಯೆಯಲಿ
ಅಕಲ ಅನಂತನು ಮಹಾತ್ಮನು ।
ಸಕಲ ಸಿದ್ಧಾಂತಿ ದುಷ್ಟರಿಗೆ ತಾ ವ್ಯಾಘ್ರನು
ಅಮಲ ಭರಪೂರ ಪ್ರತ್ಯಕ್ಷ ನರಯಮುನನು ।
ಶ್ರೀಶೈಲ ಕಾವಡಿಯು ವರ್ಷಾ ಕಳುಹಿಸುವವನು
ಕಾಡಸಿದ್ಧೇಶ್ವರ ಕುಲದೇವನು ।
ಸಿದ್ಧಗಿರಿ ಮಹಾಸ್ವಾಮಿಗಿವ ಶಿಷ್ಯನು ॥

ಏರು

ಇದ್ದನಿವ ಸರಳಾ ಕನ್ನಡದಿ ಹರಳಾ ಭುವನದಿ ಜನಿಸಿದನು
ಧರ್ಮಾನುಜ ಪಾರ್ಥ ವೀರನು ।
ವಿದ್ಯದ ಸದನ ರೂಪದಲ್ಲಿ ಮದನ ಗಣಾಧೀಶ್ವರನು ।
ಶಿವಲೋಕದಿಂದ ಇಳಿದನು ।
ಶಿವನಾಜ್ಞೆಧರಿಸಿ ಸರ್ವಜ್ಞಲೀಲನಾಡಿದನು ।
ತೀರದೆಷ್ಟು ಹೇಳಲಾರಿದನು ॥

ಸಮಾಜ ಸುಧಾರಕರೆ ಉಮಾ ಮಹೇಶ ತಾನು
ಕಮಲಾಕ್ಷನನ್ನು ಕಳುಹಿಸಿಕೊಟ್ಟನು ।
ಅಮಿತ ಮಹಿಮ ಅಖಿಳಾಂಡ ಸ್ವರೂಪನು ।
ಹತ್ತೊಂಭತ್ತು ನೂರಾ ಆರು ಅಗಸ್ಟ ಇಪ್ಪತ್ತು ಮೂರು
ಭಾದ್ರಪದ ಶುದ್ಧ ಚೌತಿಗೆ ಐಕ್ಯವಾದನು ।
ಸ್ವರ್ಗ ಸ್ವಾಧೀನನಾದ ಲಿಂಗಭೂಪ ಸಿರಸಂಗೀಶನು ॥

೧೫

ದಾನ ಕೊಟ್ಟ ಆಸ್ತಿಯು ಅಜ್ಞಾನ ನಾತೆಯಿಂದ
ಸಂಸ್ಥಾನವಾಗಿ ಸರಕಾರಿ ಸ್ವಾಧೀನು ।
ಧೂಮ ಸಾಹೇಬ ಬಂದು ಹೇರಿಸಿದ ಖಜೀನಿಯನ್ನು ।
ಬಾಯಿ ಸಾಹೇಬರಿಗೆ ಆಗಲಿಲ್ಲಾ ಇದ ಸಹನ ।
ತನ್ನ ಅಣ್ಣಾ ಕಲ್ಲನಗೌಡನನ್ನು ದತ್ತಕನಾಗಿ ಮಾಡಿ
ಮರಣ ಕಾಲದಲ್ಲಿ ವಚನ ಕೊಟ್ಟಿದ್ದನು ।
ಎಂದು ನಡಿಸಿದರು ಬಾಯಿಯವರು ನ್ಯಾಯವನು ॥

ದೇಶಗತ ಭೂಮಿ ತನ್ನ ಖಾಸಗತವಾದದ್ದೆಂದು
ಮುಲಕೀನಾತೆಯಿಂದ ಸರಟಿಫಿಕೇಟು ಬೇಡಿದರು ।
ಎದುರದಾರರಾದರಪ್ಪ ಕೇಳ್ ಫಂಡಿನವರು ।
ಹಾಯಕೋರ್ಟಿನವರು ಫಂಡಿನವರ ತಾಬೇ ಕೊಟ್ಟಾರು ।
ದಿವಾಣಿ ಮಾರ್ಗದಿ ತಾವು ದಾವೇ ತಂದರಿದಕ್ಕಾಗಿ
ಸಿದ್ಧಗಿರಿ ಸ್ವಾಮಿಯವರು ಸಹಾಯ ಮಾಡುವರು ।
ಜಜ್ಜ ಕೋರ್ಟಿನಿಂದ ದತ್ತಕ ಕಾಹೀಮ ಆದರು ॥

ಫಂಡಿನ ಮುಖ್ಯಸ್ಥರಾದ ಸಂಸ್ಥಾನ ಟ್ರಸ್ಟಿಯವರು
ಹಾಯಕೋರ್ಟಿಗಪೀಲ ಮಾಡಿ ಕೆಲಸ ನಡಿಸಿದರು ।
ಆರು ತಿಂಗಳ ಹಿಂದೆ ಫಂಡಿನಂತೆ ಹುಕುಂ ಪಡೆದರು ।
ಪುಣ್ಯವಂತ ಬರೆದ ಲೇಖೀ ಸಿದ್ಧಮಾಡಿದರು ।
ಅತ್ತ ಮಗನ ಕೈಯಲ್ಲೊಂದು ಹೆತ್ತ ತಂದೆಯು ದುಡ್ಡು ಕೊಡನು
ಸತ್ಯವಂತ ಶೀಲರಿವರು ಎಂಥ ಬಹುಳಾರು ।
ಸೂರ್ಯ ಚಂದ್ರರಿರುವತನಕಾ ತಮ್ಮ ಕೀರ್ತಿ ಉಳಿಸಿದರು ॥

ಸೊಲ್ಲಾಪುರ ಸಭಾದಲ್ಲಿ ಸಾರ್ವತ್ರಿಕ ಜನರು
ಕೂಡಿ ಕೈಲಾಸವಾಸಿ ಲಿಂಗರಾಜರನ್ನು ಸ್ಮರಿಸಿ
ಯಾವತ್ತರು ಮಾಡಿದರು ದುಃಖವನ್ನು ।
ಪುಟ್ಟಣ್ಣ ಶೆಟ್ಟರಿದ್ದರದಕ ಅಧ್ಯಕ್ಷರು ।
ತ್ರಿಸಷ್ಟಿ ಪ್ರಮಥರೊಳು ನೈಷ್ಠಿಯಿಂದಾ ಕೂಡಿಸಿದರು
ಒಟ್ಟು ಅರವತ್ತು ನಾಲ್ಕು ಮಂದಿಯನ್ನು ।
ಪ್ರಮಥನಾದ ಕೇಳಿರಿಹದಲ್ಲಿ ಲಿಂಗೇಂದ್ರನು ॥

ದೋಣಿ ತೀರದಲ್ಲಿ ಭೂಮಿ ಏನು ಹೇಳಲಯ್ಯೋ ನಾನು
ಕ್ಷೋಣಿಯಲ್ಲಿ ಇಲ್ಲದಂಥಾ ಕ್ಷಾರವುಳ್ಳದ್ದು ।
ಮನಗೂಳಿ ಉಕ್ಕಲಿ ಎರಡು ಜೋಡಿ ಎಂದು ಗೊತ್ತು ಇದ್ದದ್ದು ।
ಪರಮಾನಂದದೇವರು ಎರಡು ಊರು ನಡುವೆ ಇರುವದು ।
ರಾಮರಾಜ್ಯನಾದಂಥ ಕಾಮನನ್ನು ಸುಟ್ಟಂಥ ಯಮನಿಂದ
ಭೂಮಿ ನಿರ್ಮಾಣ ಆಗಿರುವದು ।
ಅಂಥ ಲಿಂಗಕ್ಕೆ ಎನ್ನ ಹೃದಯ ಗ್ರಾಹ್ಯವಾದದ್ದು ॥

ತಾಳೀಕೊಟೆ ಕಂಠಿ ಸ್ವಾಮೀ ಗೋತ್ರಕ್ಕೆ ಹೊಂದಿದವನು
ಹೇಳುವೆನು ಆತನಿಗೆ ನಾನು ಶಿಷ್ಯನು ।
ಮೂಲ ಕುಂಟೋಜಿಯು ಬಸವೇಶ್ವರ ಭಕ್ತನು ।
ಉಕ್ಕಲಿಯ ಪರಮಾನಂದ ಗ್ರಾಮದಾತನು ।
ಶಬ್ದ ದೋಷ ತೆಗೆದು ಹಾಕಿ ಇದ್ದ ಸಾರ ತಿಳಿದು
ಕೊಂಡು ಬುದ್ಧಿವಂತ ಕೊಟ್ಟ ವೌಲ್ಯ ಧನವನ್ನು ।
ತಪ್ಪು ತಗೆಯಲಿಕ್ಕೆ ಅಲ್ಲ ನಾನು ಕವಿಗಾರನು ॥

ಏರು

ಕೊಟ್ಟ ಸಾಮ್ರಾಜ್ಯ ಹೊಂದಿ ಸಾಯುಜ್ಯ ಸ್ವರ್ಗನಾಥನಲ್ಲಿ ।
ದಯವಿರಲಿ ದೇವರಿವರ ಮೇಲೆ ।
ಜಯ ಜಯ ಲಿಂಗ ಮಹಾರಾಯ ಕೂಡಿ ಪುಣ್ಯದಲಿ ।
ಸ್ವರ್ಗದಿಂದ ಬಂದಂಥ ಪುಷ್ಪಮಾಲೆ ।
ನವಲಗುಂದ ಸಾರ್ಥಕನಾದ ಪ್ರಾಣ ಕಡೆಯಲ್ಲಿ ।
ಬಸವ ತನುಜ ಹೀಂಗ ಹೇಳುತಲಿ ॥

ಭೀಮನಗೌಡನ ಪ್ರೀತಿಯಲ್ಲಿ ನೇಮದಿಂದ ಇರುವೆನು
ಕಾಮಧೇನು ಅಗಲಿಹೋದಾ ಸುಮ್ಮನೆ ಕೂತೆನು ।
ಸೋಮಧರನು ಕಾಯಲೆಂದು ನಾನು ಬೇಡಿಕೊಂಡೆನು ।
ಹತ್ತೊಂಭತ್ತು ನೂರಾ ಆರು ಅಗಸ್ಟ ಇಪ್ಪತ್ತುಮೂರು
ಭಾದ್ರಪದ ಶುದ್ಧ ಚೌತಿಗೆ ಐಕ್ಯವಾದನು ।
ಸ್ವರ್ಗ ಸ್ವಾಧೀನಾದ ಲಿಂಗಭೂಪ ಸಿರಸಂಗೀಶನು ॥*

---

ಬಿಜಾಪೂರ 'ಅನುಭವ ಮಂಟಪ' ಪತ್ರಿಕೆಯ ಸಂಪಾದಕರಾಗಿದ್ದ ಶ್ರೀ ಲಕ್ಕಪ್ಪ ಅ. ಶಿರಹಟ್ಟಿ ಅವರಲ್ಲಿ ಈ ಲಾವಣಿಯು ದೊರೆಯಿತು. ಲಿಂಗರಾಜರ ಆತ್ಮೀಯರ, ಬಂಧುಗಳ ಒಡನಾಟದಲ್ಲಿ ತಮ್ಮ ಬಾಲ್ಯಜೀವನವನ್ನು ಪಡೆದ ಶ್ರೀಯುತರು ಈ ಲಾವಣಿಯನ್ನು ಲಿಂ. ಅಯ್ಯಪ್ಪ ಇಂಡಿ ಉಕ್ಕಲಿ, ತಾಲೂಕ ಬಸವನ ಬಾಗೇವಾಡಿ ಇವರು ರಚಿಸಿರುವುದಾಗಿ ತಿಳಿಸಿದರು. ಶ್ರೀಮಾನ್ ಲಕ್ಕಪ್ಪನವರು ನೀಡಿದ ಲಾವಣಿಯಲ್ಲಿ ಯಾವುದೇ ರೀತಿಯ ಬದಲಾವಣೆ ಮಾಡಲಾಗಿಲ್ಲ. ಅಚ್ಚಿಗಾಗಿ ಮಾತ್ರ ಅಳವಡಿಸಲಾಗಿದೆ.

—ಎ. ಎಸ್. ಹೂಗಾರ

# ಶಿವಾ ಮುನಿದ ಬೆಸ್ತ್ಯಾರ ದಿನ

ಸಿರಸಂಗಿ ದೇಸಾಯ್ರು ವರತನ ಬಿಟ್ಟು ಹೋದ್ರು ತಮ್ಮ ಸಂಸ್ಥಾನ
ಚಂದ್ರಮನಂತ ಚಲುವರ ಮೌಲ್ಯ ಶಿವಾ ಮುನಿದ ಬೆಸ್ತ್ಯಾರ ದಿನ॥

೧

ಏನು ಹೇಳಲಿ ದುಃಖ ಬರತೈತಿ ದೊರೆಗಳ ಮನದ ಅಕ್ಕರತಿ
ಲೋಡಲೆಜಿಮಾ ತಾಲೀಮು ಕಾನ್ಯಾಗ ಶಿವಪೂಜೆ ಬಹಳ ಪ್ರೀತಿ
ಚಲುವಿಕೆ ಚಿತ್ರಾಯ ಬರದೈತಿ ಕೈಕಾಲು ಬಾಳಿಯ ದಿಂಡಗತಿ
ಕಾಮನಂಗವರು ಇಬೂತಿ ಹಚ್ಚತಾರ ಸದರಿಗೆ ಒಪ್ಪು ಸೊರ್ಪತಿ
ಸಿಪಾಯಿ ಸಿಲೆದಾರಿ ಬಹುಬರತಿ ಚಬಕ ಸ್ವಾರ ಕುದುರಿಯ ಹತ್ತಿ
ಕುದರಿಯ ಮುಂದ ಹೊಗಳುವ ಮಾದಿಗರಂತಾರ ದೊರಿಗಳ ಕೀರ್ತಿ
ಸುತ್ತಲು ರಾಜ್ಯದ ದೇಶ್ಗತಿ ಎಲ್ಲಾರಿಗಿಂತ ಅವರು ಚಡತಿ
ಯಾರೊಬ್ಬರಂತಾರ ಏನ ದೊರಿಯವರ ಪೂರ್ವದ ಪುಣ್ಯ ಹೆಚ್ಚೈತಿ
ಹಿಂಗಂತ ಹೋದರು ಬೇಲೂರಿಗೆ ತಟ್ಟಿತು ವಿಗ್ನವನ
ಉರಿ ಬಡಿದು ಬಿಗದಾವು ಬೆನ್ನ ಬಾಯಿ ಇಸಾ ಕಯಿಯಾಯಿತಿನ್ನ
ಸದಾ ಶಿವಪ್ಪ ಕೇಳೊ ಇನ್ನ ನನ್ನ ಜೀವಕಿಲ್ಲೊ ಸಮಾದಾನ
ತಿರುಗಿ ಬಂದ್ರು ಅವರು ಮರುದಿನಾ ದೊರಿಗುಳಿಗೆ ಇಲ್ಲೊ ಸಮಾದಾನ॥
ಸಿರಸಂಗಿ ದೇಸಾಯ್ರು ವರತನ ಬಿಟ್ಟು ಹೋದ್ರು ತಮ್ಮ ಸಂಸ್ಥಾನ
ಚಂದ್ರಮನಂತ ಚಲುವರ ಮ್ಯಾಲ ಶಿವಾ ಮುನಿದ ಬೆಸ್ತ್ಯಾರ ದಿನ॥

೨

ಒಂದು ದಿನ ಸಿರಸಂಗಿ ಊರಾಗ ಅಪ್ಪಾ ಸಾಹೇಬ್ರು ಕುಳಿತಿದ್ರು ಸದರಿನ್ಯಾಗ
ಮೋಸಮಾಡಿ ವಿಷಾ ಹಾಕಿದಾರ ದೂದ ಪೇಡೆ ಸಕ್ಕರಿಯಾಗ
ಫಳಾರ ಮಾಡ್ಯಾರ ರಾತ್ರಿಯಾಗ ದೊರಿ ಮಲಗಿದ್ರ ಮಂಚದ ಮ್ಯಾಗ.
ಕನಸು ಬಿದ್ದಿತವರ ಮನಸಿಗೆ ಟಾವಿಕೆ ದೊರಿ ತಿಳಿದ ತನ್ನ ಮನಸಿಗೆ
ಸಿಪಾಯ ಬಾಗೋಜಪ್ಪ ಹಿಂಗ ತಿಳಿದು ಕಸಾರ್ಕಿ ಬಂದೈತ್ರಿ ದೊರಿ ನಿಮಗ
ಹ್ಯಾವ ತೋರಿಸ್ಯಾರ ಗಂಟಲದಾಗ ಉಗಳಿಸಿದ ಹೆಸಿಕೆ ಮ್ಯಾಲ.
ಹಿಂಗಂತ ಹೋದರೊ ಹೂಲಿಕಟ್ಟಿಗೆ ಸಿದ್ಧೇಶ್ವರ ಇರುವ ದೇವರಿಗೆ
ಬೇಡಿಕೊಂಡ್ರೊ ಮನೆಯ ದೇವರಿಗೆ ಸಾಹಿತ್ಯ ಕೊಟ್ರೊ ಬ್ರಹ್ಮಣರಿಗೆ
ಅಲ್ಲಿ ಚಡವಾತೊ ದೊರಿಗಳಿಗೆ ಎಂಟಾನೆಂಟು ದಿನ ಮಲಗಿ

ಜಗ ಬದಲು ಮಾಡಬೇಕು ದೊರಿಗೆ ಅಂತಾವ್ರೊದಾರೋ ಬೆಳಗಾಂವಿಗೆ
ದೊರಿ ಹೇಳತಾರೊ ತಮ್ಮ ಮಂದಿಗೆ ಒಯ್ಯಬ್ಯಾಡ್ರೊ ನನ್ನ ಬೆಲೂರಿಗೆ
ಸಿಪಾಯ ಬಾಗೋಜಪ್ಪ ಹಿಂಗ ತಿಳಿದ ಲಗು ಮಾಡಿ ಗಾಡಿ ತರಿಸಿದ
ಗಾಡಿಯ ಒಳಗ ಮಲಗಿದ್ದ ದೊರಿ ನವಲಗುಂದ ಊರಿಗೆ ತಾ ಬಂದ ॥
ಸಿರಸಂಗಿ ದೇಸಾಯ್ರು ವರತನ ಬಿಟ್ಟು ಹೋದ್ರು ತಮ್ಮ ಸಂಸ್ಥಾನ
ಚಂದ್ರಮನಂತ ಚಲುವರ ಮ್ಯಾಲ ಶಿವಾ ಮುನಿದ ಬೆಸ್ತ್ಯಾರ ದಿನ ॥

೩

ಬಾಯಿ ಸಾಹೇಬ್ರು ಹೇಳತಾರೊ ಬಾಗೋಜಪ್ಪಗ ಕೇಳರಿ ನೀವು ನನ ಮಾತ
ಎಲ್ಲಿ ಇದ್ದಲ್ಲಿ ವೈದ್ಯಗಾರನ ಈ ವ್ಯಾಳಕ ತರಿಸರಿ ತುರತ
ಬಾಗೋಜಪ್ಪ ತಾ ಬುದ್ಧಿವಂತ ವೈದ್ಯಗಾರನ ತರಿಸ್ಯಾನ ತುರತ
ವೈದ್ಯಗಾರನು ತಿಂದು ಹೋದನು ರೂಪಾಯಿ ಮುನ್ನೂರ ಅರವತ್ತ
ಔಷದ ಔಷದ ಮಾಡಿಸುತ್ತ ಅಲ್ಲಿ ವರುಷವಾಯ್ತು ದೊರಿ ಬೇಸತ್ತ
ಎಂತ ಬೇನೆ ಇದು ಯಾರಿಗೆ ಟಾವಿಕೆ ತಿಳಿಯವಲ್ಲದು ಇದರಂತ
ಬುದವಾರ ದಿನ ಹರ್‍ಯಾಗ ಕರೆಸಿಕೊಂಡಾರೊ ತಮ್ಮ ಗುರುಗಳನ
ಎರಡು ಆಕಳ ಅಚ್ಚೇರ ಬಂಗಾರ ದಾನ ಕೊಟ್ಟರು ಐಗುಳಿಗೆ
ಕುಲಾಯಿ ಕುಂಚಿಗೆ ಹುಡುಗರಿಗೆ ರೊಕ್ಕ ರೂಪಾಯಿ ಕೊಟ್ರು ಬಡವರಿಗೆ
ಮುತ್ತಿನಂತಹ ಒಂದು ಹತ್ತು ಕೂಸಿಗೆ ಕೊಟ್ರು ಪುನ್ನೆದ ಐಗುರು ಸ್ವಾಮಿಗೆ
ಉಸ್ಪನ್ನ ಕೊಟ್ರೊ ಮಠದವರಿಗೆ ಒಂದೊಂದು ಬಳಿವಿಲೆ ಎಲ್ಲರಿಗೆ
ಬುದವಾರ ಮೂರು ತಾಸು ರಾತ್ರಿಯ ಮ್ಯಾಲ ಕರಿಸಿಕೊಂಡಾರೊ
ತಮ್ಮ ಮಡದಿಯನ್ನ
ದೊರಿ ಅಂತಾರ ತಾ ಸಮುಂತ ಏನ ಮುನಿದಿ ನೀ ಭಗವಂತ
ಜೀವದ ರಾಣಿ ಕಿಲಿಕೈಯಾ ಹಿಡಿ ನೀ ಕೊಡಬ್ಯಾಡ ಯಾರಿಗೆ
ತಾ ಮಲಗು ಅರಮನೆ ಕೋಲಿ ದೊರಿ ನೋಡತಾರ ಸುತ್ತೆಲ್ಲಾ
ಮೇಲ ಉಸಲಗಟ್ಟಿತೊ ತೀರಾ ದೊರಿ ಮಾಡತಾರ ಎತ್ತಾರಾ
ಬಾಯಿ ಸಹೇಬರು ಕುಂತಾರೊ ಹಂತಿಲೆ ನೀರು ಚಲ್ಲತಾರೊ ಕಣ್ಣೀಲಿ
ಕುದರಿ ಬಿಟ್ರು ಅವರು ಸಿರಸಂಗಿಗೆ ಕಾರ್ಕೂನ ಕಳಿವ್ಯಾರೊ ತುರ್ತಿಲಿ
ಗೌಡ ಶಾನಬವರು ರೈತರು ಹಳಬರು ವತ್ರ ಮಾಡಿ ಹೋದರು ಅದೇ ದಿನಾ
ನಿತ್ರಾಣಕ ಬಿದ್ದಿದ್ರು ಅಪ್ಪಾಸಾಹೇಬ್ರು ಎದ್ದು ಹೇಳುವಂತ ತ್ರಾಣವಾಗಲಿಲ್ಲ
ಗಾತ ಮಾಡಿ ಹೋದ್ರು ಅಪ್ಪಾಸಾಹೇಬ್ರು
ಬೇಸ್ತ್ಯಾರ ಮೂರು ತಾಸು ಹೊತ್ತೇರಿತು ಜೀವ ಬಿಟ್ಟು ಅವರಿನ್ನ ॥

ಸಿರಸಂಗಿ ದೇಸಾಯ್ರು ವರತನ ಬಿಟ್ಟು ಹೋದ್ರು ತಮ್ಮ ಸಂಸ್ಥಾನ
ಚಂದ್ರಮನಂತ ಚಲುವರ ಮ್ಯಾಲ ಶಿವ ಮುನಿದ ಬೆಸ್ತ್ಯಾರ ದಿನ ॥

೪

ಬೆಸ್ತ್ಯಾರ ದಿನ ಹರಿಯಾಗ ಸುದ್ದಿ ಹರಡಿತ್ತು ಸುತ್ತ ನಾಡಿಗೆಲ್ಲ
ಸುದ್ದಿ ಕೇಳಿದವರು ಎದೆಬಾಯಿ ಬಡಕೊಂಡು ಬಿದ್ದಾರೊ ತಂದಿಲ್ಲ
ದರಣಿಯ ಮ್ಯಾಲ
ಅಗಾದ ಹತ್ತು ಹಳ್ಳ್ಯಾಗ ಗೋಳಿಕ್ಯಾರ ಅವರ ಮುನಿಯಾಗ
ಬೆಳ್ಳೇರಿ ಶಿಗ್ಲಿ ಉಕ್ಕಲಿ ಅಕ್ಕ ತಂಗಿಯರಾರ ಬಂದಾರ ಆಗ
ಅಕ್ಕ ತಂಗಿಯರಿಗೆ ದುಃಖ ದುಂದ ಏನು ಹೇಳಲಿ ನಿಮ್ಮ ಮುಂದ
ಚಪ್ಪನ್ನ ದೇಶಕ್ಕೆ ಒಪ್ಪುವ ದವಲತ ಕೊಟ್ಟ ಹೋಗ್ಯಾರ ಯಾರ ಕೈಯಾಗ
ಇಂಗ್ರೇಜಿ ಸಾಹೇಬರು ಆವಾಗ ಸುದ್ದಿ ಕೇಳ್ಯಾರೊ ಬೆಳಗಾಂವಿಯಾಗ
ಬತ್ತಲಗುದರಿ ಒತ್ತರ ಮಾಡಿ ಹತ್ತಿ ಬಂದ್ರೊ ಮರುಗಳಿಗ್ಯಾಗ
ಸರುವ ಸಿಂಗಾರ ಕುದುರಿಗೆ ಮಾಡಿ ಚಾಬಕ ಸೋರ ಬೋರ್ಯಾಡಿ
ಕುದುರಿ ಹಿಡದಾರ ಮುಂದ ಮುಂದ ಜೋಡ ಕುದರಿ ಅಳತಾವ ಮುಖಬಾಡಿ
ಕುದರಿ ಕಣ್ಣಿನ ನೀರು ನೋಡಿ ಜನ ಅಳತೈತಿ ಹೊರಳಾಡಿ
ಊರ ಹೊರಗ ಹೊಂಟಿತೋ ವಿಮಾನ ಸುತ್ತಗಟ್ಟಿ ಅಳತೈತಿ ಜನ ॥
ಸಿರಸಂಗಿ ದೇಸಾಯ್ರು ವರತನ ಬಿಟ್ಟು ಹೋದ್ರು ತಮ್ಮ ಸಂಸ್ಥಾನ
ಚಂದ್ರಮನಂತ ಚಲುವರ ಮ್ಯಾಲ ಶಿವಾ ಮುನಿದ ಬೆಸ್ತ್ಯಾರ ದಿನ ॥

೫

ನಗಾರಿ ನೌಬತ್ತ ಹೊಡೆಸುತ್ತ ಡೆಂಕಿ ನಿಶಾನಿ ಹಿಡಿಸುತ್ತ
ಬಿರದಿನ ಕಾಳಿ ಅವರ ಮುಂದ ಮುಂದ ಸಂಬಳದವರು ನಡವುತ್ತ
ದೊರಿಗುಳ ಇಳಿವ್ಯಾರ ತಡಿಯಾಗ ಬಾಯಿ ಸಾಹೇಬ್ರು ಹೊಕ್ಕಾರು ಒಳಿಯಾಕ
ತೆಕ್ಕಿಹಾದ ಮಹಾದುಃಖ ಮಾಡತಾರ ಮುನಿಗೆದ್ದರು ಚಿಂತಿ ಮನದಾಗ
ಬಂದು ಬಳಗ ಎಲ್ಲರೂ ಕೂಡಿ ಬಾಯಿ ಸಾಹೇಬರ್ನ ಸಮಾದಾನ ಮಾಡಿ
ಬಹುಮಂದಿ ಎಲ್ಲರೂ ಕೂಡಿ ದೊರಿಗುಳನ ಮಣ್ಣ ಮರೆ ಮಾಡಿ
ರೊಕ್ಕ ರೂಪಾಯಿ ದಾನ ಮಾಡಿ ತಿರಿಗಿ ಬಂದರವರು ಅರಮನಿಗೆ
ಅಲ್ಲಿ ಗೈಬು ಸಾಹೇಬು ಜೋಡು ಹುಸೇನುಸಾಹೇಬು ಕವಿ ಮಾಡಿ
ಮೇಲೆ ಆಗಿದ್ದಿಲ್ಲಾ ಅವ ದಿನ ಏನು ಮುನಿದು ಸ್ವಾಮಿ ಬಗವಾನ ॥

ಸಿರಸಂಗಿ ದೇಸಾಯ್ರು ವರತನ ಬಿಟ್ಟು ಹೋದ್ರು ತಮ್ಮ ಸಂಸ್ಥಾನ
ಚಂದ್ರಮನಂತ ಚಲುವರ ಮ್ಯಾಲ ಶಿವ ಮುನಿದ ಬೆಸ್ತ್ರ್ಯರ ದಿನ॥*

---

*ಪ್ರಸ್ತುತ ಈ ಲಾವಣಿಯನ್ನು ತಮ್ಮ ಜೀವನದ ಸಂಧ್ಯಾಕಾಲದಲ್ಲಿ ಶ್ರೀಮತಿ ಗಂಗೂಬಾಯಿ ಮನಿಕಟ್ಟಿ, ಮನಿಕಟ್ಟಿ ತಾಲೂಕ ಸವದತ್ತಿ ಇವರು ಹಾಡಿದರು. ಈ ಲಾವಣಿಯು ತುಂಬಾ ದೀರ್ಘವಾಗಿ ಇತ್ತೆಂದು, ತಾವು ಚಿಕ್ಕವರಿದ್ದಾಗ ಹಾಡುತ್ತಿದ್ದುದಾಗಿ ಹೇಳಿದರು. ಸಿರಸಂಗಿ ದೇಸಾಯಿಯವರನ್ನು ಕುರಿತು ಇದು ಅಲ್ಲದೇ ಇನ್ನೂ ಅನೇಕ ಜಾನಪದ ಗೀತೆಗಳನ್ನು ತಾವು ಕೇಳಿರುವುದಾಗಿಯೂ ಹೇಳಿದರು. ಈ ಹಾಡಿನ ಬಗೆಗೆ ನನ್ನ ಮೊದಲ ಲಕ್ಷ ಸೆಳೆದವರು ಕರಡಿಗುಡ್ಡದಲ್ಲಿ ಸಹಾಯಕ ಶಿಕ್ಷಕರಾಗಿರುವ ಶ್ರೀ ಸಂಗಪ್ಪ ಸಿದ್ದಪ್ಪ ಹೂಗಾರ ಇವರು. ಹೂಲಿಕಟ್ಟಿಯ ಶ್ರೀ ಶಿವರಡ್ಡಿ ಹನುಮರಡ್ಡಿ ಗಿರಡ್ಡಿಯವರ ಹಾಗು ಶ್ರೀ ಶಿವಶಂಕರಪ್ಪ ಸಿದ್ದಪ್ಪ ಹೂಗಾರ ಇವರು ಶ್ರೀಮತಿ ಗಂಗೂಬಾಯಿಯವರನ್ನು ಪರಿಚಯಿಸಿ ಈ ಹಾಡು ಹೇಳಿಸಲು ಮುಂದಾದರು. ಶ್ರೀಮತಿ ಗಂಗೂಬಾಯಿಯವರು ಈಗ ಕೈಲಾಸವಾಸಿಯಾಗಿದ್ದಾರೆ. ಶ್ರೀಮತಿ ಗಂಗೂಬಾಯಿಯವರು ಹಾಡಿದ ಲಾವಣಿಯನ್ನು ಮಾತ್ರ ಮುದ್ರಿಸಲಾಗಿದೆ.

ಎ. ಎಸ್. ಹೂಗಾರ

# ಒಪ್ಪೋಲೆ

| ಪುಟ | ಸಾಲು | ತಪ್ಪು | ಒಪ್ಪು |
| --- | --- | --- | --- |
| ೩೬ | ೮ | ಅಲ್ಲಿಆದಿಲಶಾಹ | ಅಲ್ಲೀಆದಿಲಶಾಹ |
| ೩೬ | ೧೯ | ನೈಝಾವೇಂಗ್ಲ | ನೈಝಾಮಾಂಗ್ಲ |
| ೩೬ | ೨೮ | ಇಂಗ್ರಜಿಯವರು | ಇಂಗ್ರೇಜಿಯವರು |
| ೩೭ | ೧೪ | ಮಾಡುವರಂಥಾ | ಮಾಡುವರಂತಾ |
| ೪೦ | ೧೯ | ಮತ್ತೆ.... | ಮಕ್ತೆ |
| ೪೦ | ೧೯ | ಬಾವಿ | ಭಾವಿ |
| ೪೦ | ೨೭ | ವೇಶಗತದುತ್ಪನ್ನದ | ದೇಶಗತದುತ್ಪನ್ನವ |
| ೪೨ | ೨೭ | ........ನಹಿಡ | ........ನಡಿತ |
| ೪೩ | ೨ | ಕಲಬುಳಿಗಿ | ತಲಬೀಳಿಗಿ |
| ೪೩ | ೧೫ | ಇವರಿಗೆಂತೌತಣ | ಇವರಿಗೌತಣ |
| ೪೫ | ೨೨ | ಪೊರ್ವಿಪಾಲಯು | ಉರ್ವಿಪಾಲ |
| ೪೫ | ೨೬ | ಯಕಣಾತೀಸ | ಯಕಣೌತೀಸ |
| ೪೮ | ೨೫ | ಪಾತ್ತಲಕ್ಕಿದನು | ವತ್ತಲಕ್ಕಿದನು |
| ೫೨ | ೨೬ | ದೇವಣಾರ್ಯ | ರೇವಣಾರ್ಯ |
| ೫೫ | ೫ | ಬೀ. ಪ. ರೇಣಾಪೂರ | ಮ. ಪ. ರೈನಾಪೂರ |
| ೫೫ | ೧೦ | ತುತ್ತೆ | ಮತ್ತೆ |
| ೫೬ | ೧ | ಅಲ್ಲಿ | ಅಲ್ಲ |
| ೫೬ | ೨೧ | ಸುಜ್ಞಾನೆಂದ | ಸುಜ್ಞಾನನಾದ |
| ೫೬ | ೨೬ | ಸುಜ್ಞಾನ ಮೇಲೆ | ಸುಜ್ಞಾನನಾದ |
| ೫೭ | ೬ | ಮಾಡಿದರೆಂದೆನು | ಮಾಡಿರೆಂದೆನು |
| ೫೭ | ೧೦ | ದತ್ತೆ | ಅತ್ತೆ |
| ೫೭ | ೧೩ | ಸ್ವಮನು | ಸ್ವಮನ |
| ೫೭ | ೨೬ | ಮುಟ್ಟಿಸಿಂದೆನು | ಮುಟ್ಟಿಸೆಂದನು |
| ೫೮ | ೧೪ | ತಾಹಾತಾರು | ಸಹಿತಾರು |
| ೫೯ | ೨೧ | ಕನ್ನಡದಿ | ರನ್ನದಾ |
| ೬೩ | ೧೪ | ದೊರಿಗುಳಿಗೆ | ದೊರೆಗಳಿಗೆ |

---

# ಲಿಂಗಾಯತ ವಿದ್ಯಾಭಿವೃದ್ಧಿ ಸಂಸ್ಥೆಯ ಸಾಹಿತ್ಯ ಸಮಿತಿ, ಧಾರವಾಡ–೮

( ಸ್ಥಾಪನೆ : ೧೯೩೦ )

★

## — ಪದಾಧಿಕಾರಿಗಳು —

| | | |
|---|---|---|
| ೧) | ಶ್ರೀ ಆಯ್. ಎಸ್. ಬಿದರಿ, ಬಿ. ಎ., ಎಂ. ಇಡಿ. | ಚೇರಮನ್ |
| ೨) | ಪ್ರೊ. ಎನ್. ಡಿ. ಭಂಡಿವಾಡ, ಎಂ. ಎ. | ಗೌರವ ಕಾರ್ಯದರ್ಶಿ |
| ೩) | ಶ್ರೀ ಎಂ. ಸಿ. ಬಂಡಿ, ಬಿ. ಎಸ್ಸಿ., ಎಲೆಲ್.ಬಿ. | ಕೋಶಾಧ್ಯಕ್ಷ |
| ೪) | ಶ್ರೀ ಎಚ್. ಡಿ. ಚಂದನಗೌಡರ, ಬಿ. ಎಜಿ. | ಸದಸ್ಯರು |
| ೫) | ಶ್ರೀ ಬಿ. ವ್ಹಿ. ಗುಂಜೆಟ್ಟಿ, ಎಂ. ಎ. | ,, |
| ೬) | ಶ್ರೀ ಎಸ್. ಎಫ್. ಬಾಳಗಿ. ಎಂ. ಎ , ಬಿ. ಇಡಿ. | ,, |
| ೭) | ಶ್ರೀ ಎಸ್. ಎಸ್. ದೇಸಾಯಿ, ಎಂ. ಎ. | ,, |
| ೮) | ಶ್ರೀ ಎಸ್. ಬಿ. ಹಳಕಟ್ಟಿ, ಬಿ.ಎಸ್ಸಿ.,ಎಂ.ಇಡಿ. | ಸಹಕರಿಸಿದ ಸದಸ್ಯರು |
| ೯) | ಶ್ರೀ ಎಸ್. ಬಿ. ಪಾಟೀಲ, ಎಂ.ಎಸ್ಸಿ.,ಬಿ.ಇಡಿ. | ,, ,, |

++++++

ಶ್ರೀ ಎಸ್. ಬಿ. ಕಲ್ಲನಗೌಡರ, ಬಿ. ಎ. ಧಾರವಾಡ — ಕ್ಲಾರ್ಕ

